# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ–೩ ಮಾರ್ಚ್, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಅಜ್ಞಾನ ಅವಧಿಯ ಮೌನ–ವೀಣೆಯ ಮಿಡಿದು
ಸುಜ್ಞಾನಿ ಅಟವೀಶ ಪೀಠಕ್ಕೆ ಬರಲು ।
ಚಿ ಜ್ಯೋತಿ ಹೊತ್ತಿದುದು ಇನ್ನೊಮ್ಮೆ ನಿನ್ನಲ್ಲಿ
ಪೂಜ್ಯತೆಯ ಎಚ್ಚತ್ತು ಮೈ ಮುರಿಯಲು ॥

*  *  *

ಅಟವೀಶನಾತ್ಮಬಲ ಮತುಕೂರ ನಂಜುಂಡ
ಯತಿಯ ಕವಿತಾಶಕ್ತಿ ಸಂಗಮಿಸಲು ।
ಅತಿ ರಮ್ಯವೆನಿಸಿತ್ತು ನಿನ್ನ ನವ್ಯೋದಯವು
ಮತ-ಕಾವ್ಯ-ಮೈತ್ರಿಯು ಕಂಗೊಳಿಸಲು ॥

*  *  *

ನೆನೆ ನೆನೆ ಆ ದಿನ, ಏಳೇಳು ಈ ದಿನ ।
ಇನಕಿರಣ ಪಲ್ಲವಿಸಿ ಬೆಳಕಾಯಿತು
ಘನಕೆ ಘನ ಸಿದ್ಧಗಂಗಾ ಶ್ರೀಯ ಮೇಲೇಳು-
ಮನುಜ ಕುಲದೇಳಿಗೆಗೆ-ಬೆಳಗಾಯಿತು ॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ



# ಶ್ರೀವಾಣಿ

ಮನುಷ್ಯ ಸಾಹಿತ್ಯ ಪ್ರೇಮವುಳ್ಳವನಾಗಬೇಕು. ಸಾಹಿತ್ಯ ಜೀವನಕ್ಕೆ ಆನಂದ ಕೊಡುವುದು, ಒಲವು ಕೊಡುವುದು. ಸಾಮಾನ್ಯ ಜನರ ಯೋಗ ಸಾಧನೆಯ ಸುಲಭ ಮಾರ್ಗ ಸಾಹಿತ್ಯ. ಸಾಹಿತ್ಯ ಎಂದರೆ ಅಶ್ಲೀಲ ಸಾಹಿತ್ಯವಲ್ಲ. ಉದಾತ್ತ ವಸ್ತುಗಳನ್ನೊಳಗೊಂಡ ಸದ್ಗ್ರಂಥಗಳು ಎಂದರ್ಥ. ನಮ್ಮ ದೇಶದಲ್ಲಿ ಪ್ರತಿಭಾವಂತ ಕವಿಗಳು ಆಗಿ ಹೋಗಿದ್ದಾರೆ. ಹಿಂದಿನ ಕಾಲದ ಉದ್ದಾಮ ಸಾಹಿತಿಗಳ ಸಂಖ್ಯೆಗೂ ಇಂದಿನ ಸಾಹಿತಿಗಳ ಸಂಖ್ಯೆಗೂ ಹೋಲಿಸಿದರೆ ನಿರಾಶೆಯುಂಟಾಗದಿರದು. ಸಾಹಿತ್ಯ ಕ್ಷೇತ್ರದಲ್ಲಿಯೂ ಇತ್ತೀಚೆಗೆ ಜಾತಿ, ಮತ, ಪಂಗಡಗಳ ರಾಜಕೀಯ ಕಲುಷಿತ ವಾತಾವರಣ ಏರ್ಪಟ್ಟಿರುವುದು ತುಂಬ ಶೋಚನೀಯವಾದ ಅಂಶ. ಸಾಹಿತ್ಯವೂ ದೇಶ ಕಟ್ಟುವುದರಲ್ಲಿ ಒಂದು ಮೈಲಿಗಲ್ಲು ಎಂಬುದನ್ನು ನಾವು ಮರೆಯಬಾರದು.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಶಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *
ಸಹ ಸಂಪಾದಕರು
ಟಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *
ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ
1985 ನೇ ಜನವರಿಯಿಂದ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ಯುಗಾದಿ

ರಕ್ತಾಕ್ಷಿ ಕಳೆಯುತ್ತಿದೆ. ಕ್ರೋಧನ ಧಾವಿಸುತ್ತಿದೆ. ಹಣ್ಣೆಲೆಗಳೆಲ್ಲ ಉದರು ತ್ತಿವೆ. ಚಿಗರು ಕಣ್ಣಿಡುತ್ತಿದೆ. ತರು ಮರಗಳೆಲ್ಲ ಹೊಸಬಾಳ ಹೊಸ್ತಿಲಲ್ಲಿ ನಿಂತಿವೆ. ಸಂಭ್ರಮ, ಸಡಗರ, ನಿಸರ್ಗದಲ್ಲಿ. ಹಿಂದೂ ಸಂವತ್ಸರಗಳಲ್ಲಿ ರಕ್ತಾಕ್ಷಿ ಐವತ್ತೆಂಟನೆ ಯದು. ನಮ್ಮ ಸರ್ಕಾರಿ ನೌಕರರ ವೃತ್ತಿ ಜೀವನದಲ್ಲಿ ಒಂದು ಮಹತ್ವದ ಘಟ್ಟ. ಅರ್ಥ ಪೂರ್ಣ ತಿರುವು. ವೃತ್ತಿ ಜೀವನದ ನಿತ್ಯ ಯಾಂತ್ರಿಕ ಬದುಕಿನಿಂದ ನಿವೃತ್ತಿ. ಉಳಿದ ದಿನ ಮಾನಗಳನ್ನು ಹೇಗೆ ಕಳೆಯಬೇಕೆಂಬ ಆಲೋಚನೆ ವಿವಿಧ ಯೋಜನೆ ಗಳ ನೀಲಿ ನಕ್ಷೆ. ಕೆಲವರದು ತೃಪ್ತ ಜೀವನ ಕೆಲವರದು ಅರ್ಥಕ್ಕೆ ನಿಂತ ಕಟ್ಟಡ, ಇನ್ನೂ ಕೆಲವರದು ಹಲವು ಹನ್ನೊಂದು ಸಮಸ್ಯೆಗಳ ಹುತ್ತ ಆದರೇನು ? ಎಲ್ಲಕ್ಕೂ ನಿರ್ಗಮನ ಇದ್ದೇ ಇದೆ. ನಡೆದು ಬಂದ ದಾರಿಯ ದೀರ್ಘಾವಲೋಕನ. ಯುಗಾದಿ ಹಿಂದೂ ಪಂಚಾಂಗದ ರೀತಿಯಲ್ಲಿ ಕಾಲದ ಅಳತೆ ಗೋಲು, ಯುಗದ ಆದಿ. ವಿವಿಧ ಹಿನ್ನೆಲೆ ಆದಕ್ಕೆ ಭಾರತೀಯರ ಬದುಕಿನಲ್ಲಿ ಅದೂ ಗ್ರಾಮೀಣರ ಜೀವನದಲ್ಲಿ, ಬಹು ದೊಡ್ಡ ಹಬ್ಬ. "ಉಂಡದ್ದೇ ಉಗಾದಿ, ಮಿಂದದ್ದೇ ಮಹಾನವಮಿ" ಅಲ್ಲವೆ ? ಉಗಾದಿ ಮುಂದೆ ಎಷ್ಟು ತಗಾದೆ ? ಬೇವು ಬೆಲ್ಲಗಳನ್ನು ಮೆಲ್ಲುವ ದಿನ. ಸುಖ-ದುಃಖಗಳನ್ನು ಸಮವಾಗಿ ಸ್ವೀಕರಿಸಬೇಕೆಂಬ ತಾತ್ವಿಕ ಚಿಂತನೆ. ಊರೆಲ್ಲ ಹೋಳಿಗೆಯುಂಡು. ಉಯ್ಯಾಲೆಯಾಡುವ, ಜೂಜು-ಮೋಜಿನಲ್ಲಿ ಮೂರು ದಿನ ನಕ್ಕು ನಲಿಯುವ ಕಾಲ. ಬಡತನದ ಬವಣೆಯಲ್ಲಿಯೂ ಭಾಗ್ಯದ ಕನಸು ಕಾಣುವ ಸಿರಿತನ. ಕಳೆದ ಯುಗಾದಿ ಯಂದು ಇದ್ದವರೆಷ್ಟು ? ಇಂದು ಹೊಸದಾಗಿ ಬಂದವರೆಷ್ಟು ? ಲೆಕ್ಕಾಚಾರ. ಕವಿ ಗಳ ಕಾವ್ಯ ವಸ್ತುವಾಗಿ, ಭವಿಷ್ಯಕಾರರ ಶಾಸ್ತ್ರ ವಿಷಯವಾಗಿ " ಯುಗಾದಿ" ನಡೆದು ಬಂದಿದೆ. ರೈತನ ಆಶೋತ್ತರಗಳ ಸಿರಿ ದೀಪವಾಗಿ ಕುಡಿಯಾಡಿಸಿದೆ.

ರಾಷ್ಟ್ರ ಜೀವನದಲ್ಲಿ ಮಹತ್ವದ ಘಟನೆಗಳೇ ನಡೆದು ಹೋಗಿವೆ. "ರಕ್ತಾಕ್ಷಿ" ಅನ್ವರ್ಥವಾಯಿತು ರಕ್ಷಕರೇ ಭಕ್ಷಕರಾದರು. ಬಿತ್ತಿದನ್ನು ಬೆಳೆದು ಕೊಂಡರು ನಾಯ ಕರು "ರಕ್ತದ ಹೊಳೆ ಹರಿಯಿತು ಪಂಜಾಬ್, ದೆಹಲಿಗಳಲ್ಲಿ. ಚುನಾವಣೆಗಳು ನಡೆ ದುವು. ಸರ್ಕಾರಗಳು ಅಸ್ತಿತ್ವಕ್ಕೆ ಬಂದುವು. ಯೋಜನೆಗಳು, ಸಮಿತಿಗಳು, ನೂತನ ಕಾರ್ಯಕ್ರಮಗಳು. ಘೋಷಣೆಗಳ ಸಮೃದ್ಧ ಬೆಳೆ. ಬಹು ಭಾರತೀಯನ ಹೊಟ್ಟೆ ಬೆನ್ನಿಗೆ ಹತ್ತಿದರೂ ನಾಯಕರ ಪೊಳ್ಳು ಭರವಸೆಗಳ ಪ್ರವಾಹ ನಿಲ್ಲಲಿಲ್ಲ. ರಾಷ್ಟ್ರ

ಕಟ್ಟುವ ಹಂಬಲದ ಒಬ್ಬ ವ್ಯಕ್ತಿಯೂ ಕಾಣುತ್ತಿಲ್ಲ. ಪಕ್ಷ ಹಿತ, ಗುಂಪು ಹಿತ ಕುಟುಂಬ ಹಿತ, ವ್ಯಕ್ತಿ ಹಿತ-ದೃಷ್ಟಿಯ, ಹೊಸ ಪೀಳಿಗೆಯ ಜಾತ್ರೆ. ಎಲ್ಲ ಧೂಳೀ ದೂಸರ ವಾತಾವರಣ. ರಾಷ್ಟ್ರ ದ್ರೋಹದ ಮಹಾಯಜ್ಞದಲ್ಲಿ ಜವಾಬ್ದಾರಿ ಸ್ಥಾನ ಗಳಲ್ಲಿರುವವರ ಬೇಹುಗಾರಿಕೆ, ಲಜ್ಜಾಸ್ಪದ. ನೈತಿಕ ದಿವಾಳಿತನ. ಅದೇ ಚಲಾವಣೆ ಯಲ್ಲಿರುವ ನಾಣ್ಯ. ಹೀಗಾದರೆ ಹೇಗೆ? ಕ್ರೋಧನ ಕಾಲಿಡುತ್ತಿದ್ದಾನೆ. ಇನ್ನೇನು ಅವಾಂತರವೋ? ಕಣ್ಣು ತೆರೆದು ಕ್ಷಣ ಯೋಚಿಸುವ ವ್ಯವಧಾನ ಯಾರಿಗಿದೆ? ಹೀಗೇ ಮುಂದುವರಿದರೆ ಇನ್ನೆಂತು? ಎಷ್ಟು ಬೇಗ ಜವಾಬ್ದಾರಿಯರಿತು ನಡೆದರೆ ಅಷ್ಟು ಒಳಿತು. ಕ್ರೋಧನ ಆತ್ಮ ಶೋಧನಕ್ಕೆ ಬಾಗಿಲು ತೆರೆಯಲಿ, ರಕ್ತಾಕ್ಷಿಯ ಕಣ್ಣು ಕ್ರೋಧನದಿಂದ ಮತ್ತಷ್ಟು ತಪ್ತವಾಗುವುದು ಬೇಡ ಅದು ಕ್ಷಯಕ್ಕೆ ಕಾರಣವಾದೀತು! ಕ್ಷಯ ಬರಲಿ ಬರಬೇಕು; ಬರುತ್ತದೆ. ಎಲ್ಲ ಅಶುಭಕ್ಕೆ, ಅಮಂಗಳಕ್ಕೆ, ಅನರ್ಥಗಳಿಗೆ "ಯುಗ ಯುಗಾದಿ ಕಳೆದರೂ ಯುಗಾದಿ ಮತ್ತೆ ಬರುತಿದೆ"-ಎಂಬ ಕವಿ ವಾಣಿ ಸತ್ಯ. ಕಾಲ ಯಾರನ್ನೂ, ಯಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಅಂಥ ಅದ್ಭುತ ಶಕ್ತಿ ಅದಕ್ಕೆ ಯುಗಾದಿಯಂದು ನಾವು-ನಾವೆಲ್ಲ ಸಂಕಲ್ಪ ಮಾಡೋಣ. ಹೊಸ ಭಾವ, ಹೊಸ ಬೆಳಕನ್ನು ತರುವುದಾಗಿ. ನಮ್ಮ ನಮ್ಮ ಇತಿಮಿತಿಯಲ್ಲಿ ಶಾಂತಿ, ಸೌಹಾರ್ದ ಬದುಕಿಗೆ "ಹೊನ್ನಾರು"ಹೂಡೋಣ. "ನೆರೆ ಕೆನ್ನೆಗೆ, ತೆರೆಗಲ್ಲಕೆ, ಶರೀರ ಗೂಡು ಹೋಗದ ಮುನ್ನ, ಹಲ್ಲುಹೋಗಿ ಬೆನ್ನುಬಾಗಿ ಕಾಲ ಮೇಲೆ ಕೈಯ ನೂರಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ" ರಾಷ್ಟ್ರದ ಋಣ ತೀರಿಸುವ ಹೆಜ್ಜೆ ಹಾಕೋಣ. ಅದಕ್ಕೆ ಈ ಯುಗಾದಿ ಸಾಕ್ಷಿಯಾಗಲಿ. ಇಂದು ಕ್ರೋಧ ಬೇಕು ಸ್ವಾರ್ಥ, ಸ್ವಜನಾಭಿಮಾನ, ಸ್ವಪಕ್ಷಪಾತ, ಸಣ್ಣತನ, ನೀಚತನಗಳನ್ನೆಲ್ಲ ಬಿಡುವುದಕ್ಕೆ. ಹಾಗಾಗಲಿ ಎಂದೇ ಹೋಳಿಗೆ ಊಟ ಮಾಡೋಣ; ಬೇವು-ಬೆಲ್ಲ ತಿಂದು ಹೊಸ ವರ್ಷದ ಚಂದ್ರ ದರ್ಶನಕ್ಕೆ ಹೊರಡೋಣ.

ಕನ್ನಡದ ಜನತೆ ವಿಚಾರ ಶೀಲರು. ಅಂತೆಯೇ ಜನಸ್ತೋಮ ಆರಿಸಿದ ಮುಖ್ಯ ಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆಯವರು. ಶ್ರೀ ಸಾಮಾನ್ಯರ ಕಣ್ಣೀರನ್ನು ಒರೆಸು ವುದೇ ನಮ್ಮ ಸರ್ಕಾರದ ಮುಖ್ಯ ಕರ್ತವ್ಯ. ನಾಡಿನ ಹಾಗೂ ಹೊರನಾಡಿನ ಕನ್ನಡ ಜನತೆಯ ಆಶೋತ್ತರಗಳನ್ನು ಸಾಧ್ಯವಾದಷ್ಟು ಈಡೇರಿಸಿರುವ ಭರವಸೆಯಿತ್ತ ಪ್ರಯತ್ನ ಶೀಲ ಮುಖ್ಯಮಂತ್ರಿವರಿಗೆ "ಸಿದ್ಧಗಂಗಾ" ಪತ್ರಿಕೆಯ ಹಾರ್ದಿಕ ಶುಭಾಷ ಯಗಳು.



# ಮಾಣಿಕ್ಯ ದೀಪ್ತಿ-3

—ವಿದ್ವಾನ್ ಎಸ್. ಷಡಕ್ಷರಿ,
ಅಧ್ಯಾಪಕರು, ಸಂಸ್ಕೃತ ಕಾಲೇಜು, ಸಿದ್ಧಗಂಗಾಮಠ.

ಇಂದಿನ ಚಿಂತನದ ವಸ್ತು "ಚಿಂತೆ"ಯನ್ನು ಕುರಿತದ್ದು. ಒಮ್ಮೆ ನನ್ನ ಸ್ನೇಹಿತರ ಊರಿನಲ್ಲಿ ಮನೆಯ ಹಿರಿಯರೊಬ್ಬರ ಆರಾಧನೆಗಾಗಿ ಕಾಲ್ನಡಿಗೆಯಲ್ಲಿ ಹೋಗುತ್ತಿದ್ದೆ. ದಾರಿಯ ಪಕ್ಕದ ಒಂದು ಮರದ ಕೆಳಭಾಗದಲ್ಲಿ ವ್ಯಕ್ತಿಯೊಬ್ಬ ಕುಳಿತು ಹುಚ್ಚನಂತೆ ಮಾತನಾಡಿಕೊಳ್ಳುತ್ತಿದ್ದ. ಇದ್ದಕ್ಕಿದ್ದಂತೆ ಗಹಗಹಿಸಿ ನಕ್ಕು ಸುಮ್ಮನಾದ. ಆಗ ನಾನು ಮಾತನಾಡಿಸಿ ಅವನ ವಿಚಾರ ತಿಳಿದೆ. ಪ್ರಯೋಜನವಿಲ್ಲದ ನಿರರ್ಥಕವಾದ ವಿಷಯದ ಬಗ್ಗೆ ಚಿಂತಿಸಿ ಹುಚ್ಚುತನದ ಭ್ರಮೆ ಅವನಲ್ಲಿ ಕಂಡುಬಂತು. ಮುಂದುವರಿದು ಸ್ನೇಹಿತರ ಊರು ತಲುಪಿದೆ ಹಿರಿಯರ ಸಮಾಧಿಯ ಪೂಜೆ ನಡೆಯುತ್ತಿದ್ದಾಗ ಕೆಲವರು ಗೋಳಾಡುತ್ತಿದ್ದರು, ಕೆಲವರು ತಲೆಯ ಮೇಲೆ ಕೈಹೊತ್ತು ತಮ್ಮ ಹಳೆಯ ಕಥೆಯನ್ನು ಚಿಂತಿಸುತ್ತಿದ್ದರು. ಇದು ಎಲ್ಲರಲ್ಲಿಯೂ ಸಹಜವೇನೋ ನಿಜ. ಆದರೆ ಮಿಂಚಿ ಹೋದುದರ ಬಗ್ಗೆ ಚಿಂತೆ ಅವಶ್ಯಕವೆ? ಎಂದು ಈ ಸನ್ನಿವೇಶಗಳನ್ನು ಕಂಡು ಯೋಚಿಸಿದಾಗ ಹೀಗನ್ನಿಸಿತು.

'ಜಾತಸ್ಯ ಮರಣಂ ದ್ರುವಂ' ಹುಟ್ಟಿದವನು ಸಾಯಲೇಬೇಕು. ಕಷ್ಟನಷ್ಟಗಳು ಪ್ರಪಂಚದಲ್ಲಿ ಎಲ್ಲರಿಗೂ ಉಂಟು. ಅದನ್ನೇ ಪ್ರಧಾನವಾಗಿ ಚಿಂತಿಸುವುದರಿಂದ ಮತ್ತಷ್ಟು ನಷ್ಟಕ್ಕೆ ಗುರಿಯಾಗುತ್ತೇವೆ.

ಏಕೆ ನೀ ಅಳುವೆ ಏಕೆ ನೀ ನಗುವೆ
ನಡೆವುದೆಲ್ಲವು ನಮ್ಮ ಶಿವನ ನಾಟಕವೆ ।
ಹುಟ್ಟುತ ನೀ ತಂದುದೇನು
ಮತ್ತೆ ಸತ್ತಾಗ ಕೊಂಡೊಯ್ಯುವುದೇನು ॥

ಎಂಬುದು ಅನುಭವಿಗಳ ಮಾತು. ಅಂದಮೇಲೆ ನಮ್ಮ ಪಾಪಪುಣ್ಯಗಳ ಫಲವನ್ನು ಅನುಭವಿಸಿಯೇ ತೀರಬೇಕು. ಇದಕ್ಕಾಗಿ ಆಳವಾದ ಚಿಂತೆ ಅಪಾಯಕಾರಿ. ಉಂಟಾದ ಯಾವುದೇ ಕಷ್ಟನಷ್ಟಗಳ ಬಗ್ಗೆ ಅತಿಯಾಗಿ ಮಾಡುವ ಚಿಂತೆ ಮಾನವನಿಗೆ ಶಾಪರೂಪವಾಗಿ ಪರಿಣಮಿಸುತ್ತದೆ.

ಚಿತಾಯಾಶ್ಚ ಚಿಂತಾಯಾಶ್ಚ ಬಿಂದು ಮಾತ್ರ ವಿಶೇಷತಃ ।
ಚಿತಾದಹತಿ ನಿರ್ಜೀವಂ ಚಿಂತಾದಹತಿ ಜೀವಿತಂ ॥

ಚಿತೆಗೂ ಚಿಂತೆಗೂ ಮಧ್ಯೆ ಒಂದು ಸೊನ್ನೆ ಮಾತ್ರ ವ್ಯತ್ಯಾಸ. ಚಿಂತೆಯು ಜೀವಂತ ವ್ಯಕ್ತಿಯನ್ನೇ ಸುಟ್ಟುಬಿಡುತ್ತದೆ. ಅಂತರಂಗದ ಸಾಧನೆಯನ್ನು ಕುಂಠಿತಗೊಳಿಸುತ್ತದೆ.

ಜೀವನ ಜ್ಯೋತಿಯನ್ನು ಮಸುಕು ಮಾಡುತ್ತದೆ. ಜೀವನದ ಯಾವುದೇ ಕಾರ್ಯ
ನಿರುತ್ಸಾಹ, ಬೇಸರವನ್ನು ತಂದೊಡ್ಡುತ್ತದೆ. ವೈಭವ, ಪಾಂಡಿತ್ಯಗಳಿದ್ದ
ಚಿಂತೆಯು ಬೆನ್ನುಹತ್ತಿತೆಂದರೆ ದಾರಿತಪ್ಪಿ ದಿಕ್ಕು ಕಾಣದವರಾಗುತ್ತೇವೆ. ಬ
ಬದುಕು ಬರಡಾಗಿ, ನಂಬಿದ, ಆಶ್ರಯಿಸಿದವರೆಲ್ಲರಿಗೂ ಹೊರೆಯಾಗಿ ಬತ್ತಿ ಹೋ
ತ್ತೇವೆ. ಹಲವಾರು ಕಲ್ಪನೆಯ ತರಂಗಗಳು ಹೃದಯ ಸಾಗರದಲ್ಲಿ ಏರಿಳಿತಗಳನ್ನು
ಮಾಡುತ್ತವೆ. ಇದರಿಂದಾಗಿ ಆತ್ಮಹತ್ಯೆ, ಅಪಘಾತ ಇತ್ಯಾದಿ ಕಂಟಕಗಳಿಗೆ ಗ
ಯಾಗುವುದೂ ಉಂಟು. ಪೈಶಾಚಿಕ ಸಂಶಯ ಭಾವನೆಗಳು ಮೂಡಿ "ಸ
ಯಾತ್ಮೋ ವಿನಶ್ಯತಿ" ಎಂಬಂತೆ ನಾಶಹೊಂದುವುದರಲ್ಲಿ ಸಂಶಯವೇ ಇಲ್ಲ. ನರಿ
ಮಾತು ಕೇಳಿ ಕೆಸರಿನಲ್ಲಿ ಸಿಕ್ಕ ಆನೆಯಂತೆ ನಮ್ಮ ಜೀವನವು ನಿರರ್ಥಕವಾಗುತ್ತ
'ಮನಸ್ಸು ಮಂಡಿಪೇಟೆ ಕನಸು ಕನ್ನಂಬಾಡಿ' ಎಂದಹಾಗೆ. ಮುಖವು ಬಾ
ಮನಸ್ಸು ನಾನಾ ವಿಚಾರಗಳ ಗೊಂದಲಗಳಲ್ಲಿ ಬೀಳುತ್ತದೆ. ಚಿಂತೆಯು ಬಾಳಬೆಳ
ಬೆಂಕಿಯಾಗುತ್ತದೆ, ಬದುಕನ್ನು ಭ್ರಷ್ಟಗೊಳಿಸುತ್ತದೆ, ಬಹಳಷ್ಟು ಬೇಗ ಮುಖ
ತರಿಸಿ ಆಹಾರವನ್ನು ವಿಷವಾಗಿಸುತ್ತದೆ. ಇದರಿಂದ ಮನಸ್ಸೆಲ್ಲ ಕಸವಾಗಿ ನಿದ್ರೆ ನಾ
ವಾಗುತ್ತದೆ. ಈ ಚಿಂತೆಯು ಅತಿಯಾದರೆ ಹುಚ್ಚು ಹಿಡಿಯುವುದು ಖಂಡಿತ. ಅ
ಯಾರ ಉಪದೇಶವೂ ರುಚಿಸದು, ಬುದ್ಧಿ ಶಕ್ತಿಯು ಪ್ರಯೋಜನಕ್ಕೆ ಬರುವುದಿ
ಮನಸ್ಸು ಕಲುಷಿತವಾಗಿ ನೀರಿಲ್ಲದ ಹಾಳು ಬಾವಿಯಂತಾಗುತ್ತದೆ. ಶರೀರವು ಮು
ವಾಗಿ ಆತ್ಮ ಮತ್ತು ದೈವದಲ್ಲಿ ಶ್ರದ್ಧೆಯಿಲ್ಲದಂತಾಗುತ್ತದೆ. ಭವಿಷ್ಯ ಮತ್ತು ವ್ಯಕ್ತಿ
ಜೀವನದ ಸ್ವಾರಸ್ಯ ಹಾಳಾಗುತ್ತದೆ. ಲೌಕಿಕ ಜೀವನದಲ್ಲಿದ್ದವರಿಗಂತು ಚಿಂತೆಯೆಂ
ಜ್ವರವು ಮರುಕಳಿಸಿತೆಂದರೆ ಬಾಳೆಲ್ಲವು, ಕೈತಪ್ಪಿ ಬಿದ್ದ ಕನ್ನಡಿಯಂತಾಗುತ್ತದೆ.

ದ್ರೌಪದಿಯು ವಿರಾಟನಗರದಲ್ಲಿ ದಾಸಿಯಾಗಿರುವಳಲ್ಲಾ ಎಂದಾಗಲಿ, ನಾ
ಮಡಕೆಯನ್ನು ಹಿಡಿದುಕೊಂಡು ತಿರಿದುತಿಂದು ಜೀವನ ಮಾಡುತ್ತಿದ್ದೇವಲ್ಲಾ ಎಂದ
ಗಲಿ ಪಾಂಡವರು ಕೇವಲ ಚಿಂತೆಯಲ್ಲಿಯೇ ಕಾಲಕಳೆದಿದ್ದರೆ ಪುನಃ ರಾಜ್ಯ ಪಡೆ
ಲಾಗುತ್ತಿತ್ತೆ? ಸೀತೆಯು ರಾವಣನಿಗೆ ಸೆರೆಸಿಕ್ಕಿರುವಳಲ್ಲಾ ಎಂದು ರಾಮನು ಚಿಂ
ಯಲ್ಲಿಯೇ ಕಾಲಕಳೆದಿದ್ದರೆ ಮತ್ತೆ ಸೀತೆಯನ್ನು ಪಡೆಯಲಾಗುತ್ತಿತ್ತೆ. ಆದ್ದರಿಂ
'ಗತಂ ನ ಶೋಚಯೇತ್ ಪ್ರಾಜ್ಞಃ' ಬುದ್ಧಿವಂತರಾಗಿ ಕಳೆದುಹೋದುದನ್ನು ಹೆಚ
ಯೋಚಿಸುವುದು ಬಾರದು. ಚಿಂತೆಯು ಆವರಿಸುವ ಮುನ್ನ ಜಾಗರೂಕರಾ
'ಧೈರ್ಯಂ ಸರ್ವತ್ರ ಸಾಧನಂ' ಎಂಬಂತೆ ಧೈರ್ಯವಾಗಿದ್ದುಕೊಂಡು ಕರ್ತವ್ಯೋ
ನ್ಮುಖರಾಗಿ ಚಿಂತೆಯಿಂದ ದೂರವಾಗಿ ಆತ್ಮ ಚೈತನ್ಯವನ್ನು ತುಂಬಿಕೊಂಡು ಬಾ
ಬದುಕಿನಲ್ಲಿ ಸವಿಕಾಣಬೇಕು.

(14–12–84 ರ ಬೆಂಗಳೂರು ಆಕಾಶವಾಣಿ ಕೃಪೆಯಿಂದ ಪ್ರಸಾರವಾದುದು.)

# ಬಸವ ಪ್ರತಿಜ್ಞೆ

— ಟಿ. ಎನ್. ಮಹದೇವಯ್ಯ

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ. ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಕೂಡಲ ಸಂಗಮ ದೇವ ನೀವೇ ಪ್ರಮಾಣ.

ಮಾನವ ಜೀವನದಲ್ಲಿ ಪವಿತ್ರತೆ, ಸದ್ಗುಣ, ಸದಾಚಾರಗಳೇ ಹೆಚ್ಚಾಗಿದ್ದರೆ ಅವನು ಸತ್ತನಂತರ, "ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆಯರ" ನಾಟ್ಯ ರಂಗವೂ, ಸುಖದ ಸಾಮ್ರಾಜ್ಯವೂ, ನಂದನವನ ಕಲ್ಪವೃಕ್ಷಗಳ ಆರಾಮಭೂಮಿಯೂ ಸಿಗುವುದೆಂದರೆ ಅದು ಪುರಾಣದ ಮಾತಾಗಿ ಹೋಯಿತು. ಇಂಥ ಗುರಿಯು ಯಾವ ಜ್ಞಾನಿಯ ಹೃದಯವನ್ನೂ ಕರಗಿಸಲಾರದು. ಅಂಥ ಸ್ವರ್ಗವನ್ನು ಬಯಸುವವರು ಜ್ಞಾನಿಗಳ ತರಗತಿಯಲ್ಲಿ ಸೇರಲಾರರು. ಧರ್ಮದಿಂದ ಮನುಷ್ಯ ಜೀವನಕ್ಕೆ ಸುಖ ಸಿಕ್ಕಬೇಕು. ಅದೂ ಶಾಶ್ವತ ಸುಖ. ಚಾಣಕ್ಯನ ನುಡಿಯಂತೆ "ಸುಖಸ್ಯ ಮೂಲಂ ಧರ್ಮಃ" ಆದುದರಿಂದ ಧರ್ಮಾಚರಣೆ, ಸತ್ಯಾಚರಣೆಗಳು ಜೀವನದಲ್ಲಿ ಬೆಳೆಯ ಬೇಕು. ಸತ್ಯವು ಜೀವನ ಜೀವವಾಗಬೇಕು. ಸತ್ಯಕ್ಕೆ ಎಳ್ಳಷ್ಟು ಲೋಪ ಬಂದರೂ ಮನುಷ್ಯನಿಗೆ ನಿಜವಾದ ಸುಖ ಸಿಗಲಾರದು. ಕಷ್ಟದಲ್ಲಿ ಬಿದ್ದು ತೊಳಲಬೇಕಾಗು ವುದು. ಸುಖಿಸುವುದೇ ಸ್ವರ್ಗ. ದುಃಖಿಸುವುದೇ ನರಕ. ಸುಖ - ದುಃಖಕ್ಕೆಲ್ಲಾ ಸತ್ಯವೇ ಮೂಲ. ಜಗತ್ತಿನ ಆಗು ಹೋಗುಗಳಿಗೆ ಕಾರಣವು ಸತ್ಯ. "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬ ಈ ಉಪನಿಷದ್ವಾಕ್ಯವು ಸತ್ಯದ ನಿಜವಾದ ಬೆಲೆಯನ್ನು ಅಕ್ಷ-ರಶಃ ಬರೆದು ತೋರಿಸುತ್ತದೆ. ಇದನ್ನೇ ಬಸವೇಶ್ವರನು ಜೀವ – ದೇವರ ಸಮರಸದ ಭಾವದಲ್ಲಿ ಸತ್ಯದ ಬೆಲೆಯನ್ನು ಕುರಿತು ಹೀಗೆ ನುಡಿದಿರುವರು.

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯಾ ಎರಡಾಳಿನ ಭಾಷೆಯ, ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವಾ" ಜೀವ-ದೇವರ ಹೋರಾಟದಲ್ಲಿ ದೇವನನ್ನು ಗೆಲ್ಲುವ ಆಯುಧವೇ ಸತ್ಯ. ಸತ್ಯದ ಆಚರಣೆಯಿಂದ ತನ್ನ ಪ್ರತಿಯೊಂದು ನಡೆನುಡಿಗಳೂ ಪವಿತ್ರವಾಗುತ್ತವೆ. ಧರ್ಮದ ಧವಳತೆಯ ವಾತಾವರಣವು ಅವನ ಸುತ್ತಲೂ ಹರಡುತ್ತದೆ ಸತ್ಯದ ಸವಿ ಕಂಪನ್ನು ಜಗತ್ತು

ಸವಿಯುತ್ತದೆ. ಆ ಬೆಳಕಿಗೆ ಸೋತು ವಿಶ್ವವು ಅವನ ಮುಂದೆ ತಲೆಬಾಗುತ್ತದೆ ಅದು ಸ್ವರ್ಗವಲ್ಲವೇನು ? ಅಂಥ ಶ್ರೇಷ್ಠತಮವೂ ಹಿರಿದೂ ಆದ ವಾತಾವರಣಕ್ಕಿಂತ ಪವಿತ್ರವಾದ ಲೋಕವಾವುದೂ ಇಲ್ಲ. ರಂಭೆ, ಊರ್ವಶಿಯರ ನೂರಾರು ಸ್ವರ್ಗಗಳು ಈ ಭಾವನೆಯ ಮಹಾತ್ಮರ ಮುಂದೆ ಕಸ-ಕಡ್ಡಿಯಂತೆ ತುಚ್ಛವಾಗಿ ಕಾಣುತ್ತವೆ. ಸರಳತೆಯು ಅವರ ಜೀವನದ ಹಾಸು ಹೊದಿಕೆ. ಆ ಸವಿಗನಸು ನೆನಸುಗಳೆಲ್ಲಾ ಅವರ ಮುಂದೆ ಬಿದ್ದು ಕರಗಿ ಹೋಗುತ್ತವೆ. ಮಹಾತ್ಮ ಗಾಂಧೀಜಿಯವರು ಹೇಳಿರುವ ಆ ನುಡಿಗಳನ್ನು ನೋಡಿರಿ. "ನಾನು ದೇವರನ್ನು ಸತ್ಯವೆಂದೇ ಮಾತ್ರ ಪೂಜಿಸುವವನು.... ನಾನು ಇದನ್ನುಕಂಡುಹಿಡಿಯಲು ... ನನ್ನ ಪ್ರಾಣವನ್ನೇ ಬಲಿಕೊಡಬೇಕಾದ ಪ್ರಸಂಗ ಬಂದರೂ ಅದನ್ನು ಆನಂದದಿಂದಕೊಡಲು ಸಿದ್ಧನಾಗಬೇಕೆಂದು ನಾನು ಬಯಸುವೆನು" ಮತ್ತೊಮ್ಮೆ "ಸತ್ಯವೇ ದೇವತೆ, ಸ್ವರಾಜ್ಯವು ಸತ್ಯದ ಒಂದು „ಅಂಗ ಎಂದಿರುವರು. ವಿಶ್ವದ ಅಳಿವು ಉಳಿವುಗಳಿಗೆ ಜೀವನ ಉನ್ನತಿಗೆ ಸತ್ಯವು ಮೂಲ ಮಂತ್ರ. ಸತ್ಯಾಚರಣೆಯೇ ಎಲ್ಲ ಧರ್ಮಗಳ ಪ್ರಣವ ಮಂತ್ರವು.

ಇದನ್ನು ಆಚರಿಸುವುದು ಮನುಷ್ಯನ ಕಡೆಯೇ ಇರುತ್ತದೆ. ಕೊರಲಿನ ಸುಣ್ಣನಿಯೂ ನೀಳ್ದನಿಯೂ ತನ್ನ ಬಲದಲ್ಲೇ ಇರುತ್ತವೆ. ಶುಚಿಯಾಗಿರುವುದೂ ಕೊಳಕಾಗಿರುವುದೂ ತನ್ನಿಂದಲೇ ಸಾಧ್ಯ. ಸುಖವನ್ನೂ ದುಃಖವನ್ನೂ ಅನುಭವಿಸುವುದು ತನಗೆ ಸಿಲುಕಿದ ವಿಷಯ, ದುಃಖದಲ್ಲಿ ಸುಖವನ್ನು ಸವಿಯುವುದು ಮಾನವ ಶಕ್ತಿಗೆ ಸೇರಿದ್ದು. ಸ್ವರ್ಗವನ್ನು ನರಕವನ್ನಾಗಿಯೂ, ನರಕವನ್ನು ಸ್ವರ್ಗವನ್ನಾಗಿಯೂ ಮಾಡುವ ಆತ್ಮಬಲವು ಮನುಷ್ಯನಲ್ಲಿದೆ. "ಸತ್ಯವು ನನ್ನ ಜೀವದ ಜೀವ. ನನ್ನ ಉಸಿರಿನ ಉಸಿರು"- ಎಂದು ಆಚರಿಸುವವನು ದೇವನಾಗುವನು. ಇದನ್ನು ಕುರಿತು ಸ್ವಾಮಿ ರಾಮತೀರ್ಥರು ಇಂತೆಂದು ನುಡಿದಿರುವರು. "ನೀವು ಸತ್ಯದ ಸಂಗಡ ಬದುಕಿರಿ ಅಥವಾ ಅದರ ಸಂಗಡ ಸಾಯಿರಿ. ನೀವು ಸತ್ಯದ ಶಿಖರದ ಮೇಲೆ ಒಬ್ಬರೇ ಇದ್ದಾಗ್ಯೂ ನಿಮಗೆ ಸತ್ಯಪ್ರಿಯನಾದ ಉಜ್ವಲ ಸೂರ್ಯನ ಯೋಗ್ಯ ಸಹವಾಸವು ದೊರಕುವುದು. ನೀವು ಸತ್ಯದ ಶಿಖರದ ಮೇಲಿಂದ ಮೂಡಿದ ಸೂಚನೆಗಳನ್ನು ಸಾವಿರಾರು ಜನರು ಗ್ರಹಣ ಮಾಡಿ ನಿಮ್ಮನ್ನು ಕೂಡಿಕೊಳ್ಳುವರು." ಇದನ್ನೇ ಮತ್ತೊಂದು ಬಾರಿ ಈರೀತಿ ನುಡಿದಿರುವರು. "ಸದ್ವರ್ತನೆಯೇ ಈಶ್ವರತ್ವವು..... ದೇವರ ಮೇಲಿನ ವಿಶ್ವಾಸಕ್ಕಿಂತ ಸತ್ಯದ ಮೇಲಿನ ವಿಶ್ವಾಸಕ್ಕೆ ಧರ್ಮವೆನ್ನುವುದು ಹೆಚ್ಚು ಒಳ್ಳೆಯದು. ಆದುದರಿಂದ ಸತ್ಯ ಮತ್ತು ಸದಾಚರಣೆಯು ಎಷ್ಟು ಉಚ್ಚತರವಾಗಿರುವುದೆಂದು ತಿಳಿಯುತ್ತದೆ. ಸದಾಚರಣೆಯು ಮಾನವ ಶಕ್ತಿಗೆ ಸೇರಿರುತ್ತ-ದೆಂಬುದಕ್ಕೆ ಸ್ವಾಮಿ ರಾಮತೀರ್ಥರ ನುಡಿಗಳು ಸಾಕ್ಷಿ. ಜನರು ನಿಜವಾಗಿ ಅರಮನೆಯಲ್ಲಾಗಲೀ ಗುಡಿಸಲದಲ್ಲಾಗಲೀ ಇರುವುದಿಲ್ಲ, ಅವರು ಸ್ವಂತ ಕಲ್ಪನಾ ಸೃಷ್ಟಿಯಿಂದ ಉತ್ಪನ್ನಮಾಡಿದ ನರಕದಲ್ಲಿ ಅಥವಾ ಶಾಂತಿನಿವಾಸದಲ್ಲಿ ಇರುವರು. ಸತ್ಯ

ವನ್ನು ಮನೆಮಾತು ಮಾಡಿದ ಬಸವೇಶ್ವರರ ಈ ವಚನವನ್ನು ನೋಡಿರಿ.

"ಪುಣ್ಯ ಪಾಪಗಳೆಂಬುವು ತಮ್ಮ ಇಷ್ಟವು ಕಂಡಿರೇ. ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ. ದೇವಾ ಭಕ್ತಜಯ ಜೀಯಾ, ಎಂಬ ನುಡಿಯೊಳಗೆ ಕೈಲಾಸವೈದದೇ ಕೂಡಲ ಸಂಗಮದೇವಾ!" ಇಂಥ ಸುಲಭ ಸತ್ಯ ಸಮಾಜದ ರಚನೆಯ ಮುಂದೆ ಯಾರು ತಲೆಬಾಗದಿರುವರು? ಅಂಥ ಸಾಮಾಜಿಕ ರಚನೆಯನ್ನು ಮಾಡಿದ ಅನುಭವದ ಮಾತಿದು. ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಇದೇ ಭಾವವನ್ನು ಪ್ರಕಟಪಡಿಸಿರುವನು.

"ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ
ಕಾಮಕಾರತಃ।
ನ ಸಿದ್ಧಿ ಮವಾಪ್ನೋತಿ ನ ಸುಖಂ
ನಪರಾಂಗತಿಂ॥

ಯಾವನು ಶಾಸ್ತ್ರವಿಹಿತ [ಅಂದರೆ ದೈವೀಗುಣಗಳ ಮೂಲವಾದ ಸತ್ಯಮಾರ್ಗವನ್ನು] ಮಾರ್ಗವನ್ನು ಬಿಟ್ಟು ಸ್ವೇಚ್ಛಾನುಸಾರ ನಡೆಯುತ್ತಾನೋ ಅವನು ಜ್ಞಾನ ಸಿದ್ಧಿಯನ್ನೂ ಸುಖವನ್ನೂ ಪರಗತಿಯನ್ನೂ ಸಹ ಹೊಂದಲಾರನು". ಇದನ್ನು ಮೀರುವವನಿಗೆ ಸಿಕ್ಕುವ ನರಕವನ್ನು ಕುರಿತು ಇಂತೆಂದಿರುವನು.

"ಅಸುರೀಂ ಯೋನಿಮಾಪನ್ನ ಮೂಢಾಜನ್ಮ
ನಿಜನ್ಮನಿ।
ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯ
ಧಮಾಂ ಗತಿಂ॥

ಅಸುರ ಯೋನಿಗಳಲ್ಲಿ ಹುಟ್ಟಿ ಜನ್ಮ ಜನ್ಮದಲ್ಲಿಯೂ ಅರೆಮೂಢರಾಗಿ ನಿನ್ನನ್ನು ಹೊಂದದೇನೇ ಅಧಮ ಗತಿಯನ್ನೈದುವನು"

ಸತ್ಯದ ಹಿರಿಮೆ ಮಹತ್ವಗಳನ್ನು ತಿಳಿನುಡಿಯಲ್ಲಿ ತಿಳಿಸಿದ ಬಸವೇಶ್ವರರ ಮಹತ್ವವನ್ನು ಹೊರಗೆಡಹುವ ಈ ವಚನ ಚಿದಾನಂದ ಚಿರಶಾಂತಿ ಕೊಡುವ ದೇವಲೋಕ ಬೇರೆಯಿಲ್ಲ. ಸತ್ಯವನ್ನು ನುಡಿವುದರಿಂದ ಸ್ವರ್ಗದ ಸುಖ-ಶಾಂತಿಗಳು ಚಿರಕಾಲ ನಿನ್ನ ಪಾಲಿಗೆ ಉಳಿಯುವುವು. ಸುಳ್ಳನ್ನು ಹೇಳುವುದರಿಂದ ಜಗತ್ತಿನ ಕೋಟಲೆಗೆ ಸಿಕ್ಕಿ ತಪಿಸಬೇಕಾಗುವುದು. ಸತ್ಯವನ್ನು ಆಚರಿಸುವುದರಿಂದ ಸ್ವರ್ಗದ ಜೀವನವು ನಿನ್ನ ಬಳಿಸಾರುವುದು. ಅಸತ್ಯವನ್ನು ಸ್ವೀಕರಿಸುವುದರಿಂದ ಘೋರತರ ದುಃಖಗಳಲ್ಲಿ ಸಿಲ್ಕಿ ನರಕ ಸುಖವನ್ನು ಅನುಭವಿಸುವುದಕ್ಕೆ ಪರಮಾತ್ಮನೇ ಸಾಕ್ಷಿಯಾಗಿದ್ದಾನೆ" ಎಂದು ಪರಮಾತ್ಮನನ್ನು ಸಾಕ್ಷಿ ಮಾಡಿಟ್ಟು ನುಡಿದಿರುವನು.

# ಶರಣೆಯರು ಮತ್ತು ಶಿಕ್ಷಣ

ಎಂ. ಎ. ನೀಲಾಂಬಿಕಾ. ಎಂ.ಎ. ಬಿ ಎಡ್.
ಡಿಪ್. ಇನ್. ಫೋಕ್ಲೋರ್,
242, ಉತ್ತರಾದಿಮಠದ ರಸ್ತೆ, ಮೈಸೂರು - 570004.

ಇಂದು ಎತ್ತನೋಡಿದೊಡತ್ತ ಅನೈತಿಕತೆ, ಅಧರ್ಮ, ಅನ್ಯಾಯ, ಸ್ವಾರ್ಥ, ಮೋಸ, ವಂಚನೆ, ಲಂಚಾವತಾರ ತಾಂಡವವಾಡುತ್ತಿದೆ. ನಾಗರೀಕತೆಯಲ್ಲಿ ಮುಂದುವರಿಯುತ್ತಿದ್ದರೂ ಹೆಚ್ಚು ವಿದ್ಯಾವಂತರೆನಿಸಿದರೂ ಈ ಮೇಲಿನ ಗುಣಗಳಿಂದ ಮುಕ್ತರಾಗಿಲ್ಲ. ನಮ್ಮ ಸಂವಿಧಾನದಲ್ಲಿ ರೂಪಿಸಿರುವ ತತ್ತ್ವಗಳು. ಸಹನೆ ಭ್ರಾತೃತ್ವ ಐಕ್ಯತೆ ಕೇವಲ ಗ್ರಂಥಸ್ಥವಾಗಿದೆಯಷ್ಟೇ ಹೊರತು ಆಚರಣೆಯಲ್ಲಿಲ್ಲ. ಇವೆಲ್ಲದರ ಆಚರಣೆಯನ್ನ ದೇಶ ಸಂಮೃದ್ಧಿಯಿಂದ ಕೂಡಿದುದನ್ನ ಎಂದಾದರು ಕಂಡಿದ್ದೇವೆಯೇ? ಕಂಡಿದ್ದೇವೆ.

12ನೇ ಶತಮಾನವನ್ನ ನೆನಪಿಸಿಕೊಂಡರೆ ಸಾಕು ಮತ್ತೊಮ್ಮೆ ಅಂಥ ಸುಖೀ ರಾಜ್ಯವನ್ನ ಕಾಣುತ್ತೇವೆಯೇ? ಎನಿಸುತ್ತದೆ. ಇದಕ್ಕೆ ಕಾರಣ ಅಂದಿನ ಜನತೆಗೆ ದೊರೆತ ಶಿಕ್ಷಣದ ಫಲ-ಮರ ಮರ ಮಥನಿಸಿ ಕಿಚ್ಚು ಹುಟ್ಟಿದಂತೆ, ಅನುಭಾವಿಗಳ ಅನುಭಾವ ಹುಟ್ಟಿತು. ಎಲ್ಲರೂ ಅಂದು ಅನುಭವಿಗಳಾದರು ಸುಜ್ಞಾನ ದೀಪ್ತಿಗಳೆನಿಸಿದರು ಅಂದು ಅವರು ನಮ್ಮಂತೆ ಪುಸ್ತಕಗಳ ಹೊರೆ ಹೊತ್ತು ಯಾವ ಶಾಲೆ ಕಾಲೇಜಿಗೂ ಹೋದವರಲ್ಲ. ತಮ್ಮ ದೈನಂದಿನ ಅನುಭವವನ್ನು ಅನುಭವ ಮಂಟಪವೆಂಬ ವಿಶ್ವವಿದ್ಯಾನಿಯದಲ್ಲಿ ಮಂಡಿಸಿ ಚರ್ಚಿಸಿದರು. ಪರಿಣಾಮ ಹೆಚ್ಚಿನ ಜ್ಞಾನ ಪಡೆದರು. ತನ್ಮೂಲಕ ಸಮಾಜ ಕಲ್ಯಾಣ, ಮಾನವ ಕಲ್ಯಾಣ ಎರಡನ್ನು ಸಾಧಿಸಿದರು. ಪ್ರಸ್ತುತ ಶರಣೆಯರಿಗೆ ಎಂಥ ಶಿಕ್ಷಣ ದೊರಕಿತ್ತು? ಅವರು ಅದನ್ನು ಹೇಗೆ ಜೀವನದಲ್ಲಿ ಅಳವಡಿಸಿಕೊಂಡಿದ್ದರೆಂಬುದನ್ನು ಮಾತ್ರ ಪಕ್ಷಿನೋಟವೆಸಗಿದ್ದೇನೆ.

ಶರಣೆಯರ ಕಾಲದಲ್ಲಿ ಅನುಭವ ಮಂಟಪವು ಒಂದು ವಿಶ್ವವಿದ್ಯಾನಿಲಯದಂತೆ ಇಂದಿನಂತೆ ರಸ್ತೆಗಳಿಗೆ ಎರಡು ಮೂರು ಶಾಲೆಗಳಿರಲಿಲ್ಲ. ಈ ವಿಶ್ವವಿದ್ಯಾನಿಲಯಕ್ಕೆ ಸೇರಬೇಕಾದರೆ ಅಲ್ಲಿನ ಮುಖ್ಯಸ್ಥನಾದ ಪ್ರಭುದೇವರ ಪ್ರಶ್ನೆಗಳಿಗೆ ಸಮರ್ಪಕವಾಗಿ ಉತ್ತರಿಸಬೇಕಿತ್ತು. ನಿದರ್ಶನವಾಗಿ ನೋಡಿದರೆ ಅಕ್ಕಮಹಾದೇವಿ ಉಡುತಡಿಯಿಂದ ಕಲ್ಯಾಣಕ್ಕೆ ಬಂದ ಸಂದರ್ಭದಲ್ಲಿ ಅಷ್ಟು ದೂರದಿಂದ ಜನರನ್ನು ಉದ್ಧರಿಸುತ್ತ ಬಂದ ಜಗದಕ್ಕನಿಗೆ ಸಿಕ್ಕ ಸ್ವಾಗತವಾದರೂ ಎಂಥದು? ತಳಿರು ತೋರಣವೇ? ಇಂದಿನವ

ರಂತೆ ವೈಭವಯುತವಾದ ಸ್ವಾಗತವೇ? ಇಲ್ಲ. ಅನುಭವ ಮಂಟಪಕ್ಕೆ ಕಾಲಿಡು-
ತ್ತಿದ್ದಂತೆ ಪ್ರಭುದೇವರೆಂಬ ಪ್ರಿನ್ಸಿಪಾಲರ ಪ್ರಶ್ನೆಗಳ ಸುರಿಮಳೆ. ಉದ್ದಕ್ಕೂ ಜನರನ್ನು
ವಿಶಾಲತತ್ವ ಪ್ರಚಾರ ಮಾಡುತ್ತ ತಾನು ಪಡೆದ ಉನ್ನತ ಶಿಕ್ಷಣದಿಂದ ಜನರನ್ನು
ತಿದ್ದುತ್ತ ಬಂದ ಈ ಜಂಗಮ ಪ್ರಭುವಿನ ಪ್ರಶ್ನೆಗಳಿಂದ ವಿಚಲಿತಳಾಗಲಿಲ್ಲ. ತಕ್ಕ
ಉತ್ತರವನಿತ್ತು ಪ್ರಭುವೇ ಶರಣೆಂದು ತಲೆಬಾಗುವಂತೆ ಮಾಡುತ್ತಾಳೆ. ಇದು ಅಕ್ಕನಿಗೆ
ದೊರೆತಿದ್ದ ಶಿಕ್ಷಣದ ಫಲ. ಒಬ್ಬ ಉನ್ನತ ಸ್ಥಾನದಲ್ಲಿದ್ದ ವ್ಯಕ್ತಿ ಇನ್ನೊಬ್ಬರ ಜ್ಞಾನ
ವನ್ನು ಕಂಡು ಅದಕ್ಕೆ ತಲೆಬಾಗಿ ನಿಂತುದು ಇಂದು ನಾವು ಬೆಳೆಸಿಕೊಳ್ಳಬೇಕಾದ
ಮಹತ್ವಗುಣ. ಇಂದಿನ ಹೆಣ್ಣುಮಕ್ಕಳು ಅಕ್ಕನಂತೆ ದಿಟ್ಟತನವನ್ನು ಪಡೆದುಕೊಳ್ಳ
ಬೇಕು. ತಾನು ಉನ್ನತ ಶಿಕ್ಷಣ ಪಡೆದು ಸ್ವತಂತ್ರವಾಗಿ ಜೀವನವನ್ನು ನಡೆಸುತ್ತೇನೆ
ಎಂಬ ಧೈರ್ಯಮಾಡದ ಹೊರತು ಸೀಮೆಎಣ್ಣೆಯನ್ನು ಸುರಿಸಿ ಕಟ್ಟಿಗೆಯಂತೆ ಉರಿದು
ಹೋಗುವುದು, ತುಳಿಸಿಕೊಳ್ಳುವುದು, ತಪ್ಪುವುದಿಲ್ಲ. ವರದಕ್ಷಿಣೆಯ ದಳ್ಳುರಿಗೆ ಸಿಕ್ಕ
ಹೆಣ್ಣು ಬೂದಿಯಾಗುವುದು ತಪ್ಪುವುದಿಲ್ಲ.

ಅನುಭವ ಮಂಟಪದಲ್ಲಿ ಶರಣೆಯರಿಗೆ ದೊರೆತ ವಿಷಯ ದಿನನಿತ್ಯದ ಅನು
ಭಾವದ ಒರೆಗಲ್ಲಿಗೆ ಬಿದ್ದು ಬದುಕಿಬಂದವು. ಮುಂದಿನ ಮಾನವ ಜನಾಂಗಕ್ಕೆ ಶಿಕ್ಷಕ-
ರಾಗಿ ನಿಂತರು ಶರಣೆಯರು.

ಸ್ತ್ರೀಯರಾಗಲೀ ಪುರುಷರಾಗಲೀ ಇಲ್ಲಿನ ವಿಶ್ವವಿದ್ಯಾನಿಲಯಕ್ಕೆ ಸೇರಬೇಕಾದರೆ
ಸಪ್ತ ಗುಣಗಳನ್ನು ವೈಗೂಡಿಸಿಕೊಂಡಿರಬೇಕು. "ಕಳಬೇಡ, ಕೊಲಬೇಡ, ಹುಸಿಯ
ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ,
ಇದಿರ ಹಳಿಯಲುಬೇಡ" ಮುಂತಾದ ಸಪ್ತ ಗುಣಗಳನ್ನು ಒಳಗೊಂಡಿರಬೇಕು.
ಅಂಥವರಿಗೆ ಪ್ರವೇಶ ದೊರಕುತ್ತಿತ್ತು. ಸದಾ ತಮ್ಮ ದಿನನಿತ್ಯದ ಸಮಸ್ಯೆಯನ್ನು
ಅನುಭವವನ್ನು ಕುರಿತು ಚರ್ಚೆ ನಡೆಯುತ್ತಿದ್ದುದರಿಂದ ಸಾಮಾನ್ಯಜನರೂ ಸುಜ್ಞಾನ
ವಂತರಾಗಲು ಸಾಧ್ಯವಾಯಿತು. ನಾಲ್ಕು ಗೋಡೆಯ ಒಳಗೆ ಇದ್ದು ದಿನಗಳನ್ನು ಕಳೆ
ಯುತ್ತಿದ್ದ ಹೆಣ್ಣು ಇಲ್ಲಿ ತನ್ನ ಅನುಭವದ ತುತ್ತ ತುದಿಗೇರಿದ್ದಳು. ಪತಿ ತಪ್ಪಿದಾಗ
ಆತನನ್ನು ತಿದ್ದಿ ದಾರಿಗೆ ತಂದಳು. ಇವರು ಮಾಡಿದ ವಾದ ಬರೀ ಆಧ್ಯಾತ್ಮಿಕ
ವಾಗಿರಲಿಲ್ಲ. ಅದರ ಹಿನ್ನೆಲೆಯಲ್ಲಿ ಸಮಾಜದ ಏಳ್ಗೆಯು ಇತ್ತು. ನಾವು ಡಿಗ್ರಿಗಳ
ಸರಮಾಲೆ ಧರಿಸಿದರೂ ಕಲಿಯುದಿರುವಂತ ಶಿಕ್ಷಣ ದೊರಕಿತು. ನುಡಿವುದು, ನಡೆ
ವುದು, ಆಚಾರ, ವ್ಯವಹಾರ, ಎಲ್ಲ ಬಗೆಯ ಶಿಕ್ಷಣ ಪಡೆದರು. ನುಡಿದಂತೆ ನಡೆ
ದರು, ನಡೆದಂತೆ ನುಡಿದರು. ಇದು ಅವರಿಗೆ ದೊರೆತ ಶಿಕ್ಷಣದ ಫಲ.

ತಾವು ದಿನನಿತ್ಯ ತೆಗೆದುಕೊಳ್ಳುವ ಪ್ರಸಾದ ಶಿವನಿತ್ತ ಪ್ರಸಾದ. ಅದನ್ನು ಹೆಚ್ಚು
ಸಂಗ್ರಹಿಸಲೂಬಾರದು. ಅನಾವಶ್ಯಕವಾಗಿ ಬಳಸಿ ಅದನ್ನು ಹೊರಚೆಲ್ಲಲುಬಾರದು.

ಈ ಶಿಕ್ಷಣ ಶರಣೆಯರಿಗೆ ದೊರೆತದ್ದು. ಇಂದು ನಮ್ಮ ಹೆಣ್ಣು ಮಕ್ಕಳು ಎಲ್ಲಿಯೇ ಸಮಾರಂಭಗಳಾಗಲಿ ಪ್ರಸಾದವನ್ನು ಹೊರಚೆಲ್ಲುವುದು ಒಂದು ಫ್ಯಾಶನ್ ಆಗಿಬಿಟ್ಟಿದೆ. ಅಂತಹವರು ಶರಣೆಯರಿಗೆ ದೊರೆತಿದ್ದ ಶಿಕ್ಷಣದತ್ತ ಗಮನಹರಿಸಬೇಕು. ಅತೃಪ್ತಿಯಿಂದ ಕೂಡಿದ ಜನ ತಮ್ಮ ಮೋಜಿನ ಜೀವನಕ್ಕಾಗಿ ಪತಿಯನ್ನು ಹೆಚ್ಚು ಲಂಚ ತೆಗೆದುಕೊಳ್ಳಿ ಎಂದು ಪ್ರೇರೇಪಿಸುವ ಮಾತಿಗೆ ಲಕ್ಕಮ್ಮ ಸವಾಲೆಸೆದಿದ್ದಾಳೆ. ಎಂದಿಗಿಂತ ಪತಿ ಹೆಚ್ಚು ಅಕ್ಕಿ ತಂದಾಗ "ಇಂದೇಕೆ ಇಷ್ಟೊಂದು ಅಕ್ಕಿಯನ್ನು ತಂದಿರಿ?" ಎಂದು ಹೇಳಿದ್ದಲ್ಲದೆ ದುರಾಶೆಯಿಂದ ತಂದಿರುವ ಅಕ್ಕಿಯನ್ನು ಅಲ್ಲಿಯೇ ಸುರಿದುಬನ್ನಿ ಎಂದುದಲ್ಲದೆ ಪತಿಯನ್ನು ತಿದ್ದುವ ಕೆಲಸವನ್ನು ಮಾಡಿದ್ದಾಳೆ. ಅಂತೆಯೇ ತಾನು ಕೈಲಾಸಕ್ಕೆ ಹೋಗಬೇಕೆಂದು ಹಂಬಲಿಸಿದ ಮೋಳಿಗೆ ಮಾರಯ್ಯನನ್ನು ಕುರಿತು, "ಮಾಡಿನೀಡಿ ಹೋದೆಹೆನೆಂದರೆ ಕೈಲಾಸವೇನು ಕೈಕೂಲಿಯೇ ? ಎನ್ನುತ್ತಾಳೆ ಮಹದೇವಮ್ಮ. "ಲಂಚವಂಚನಕ್ಕೆ ಕೈಯ್ಯಾನದ ಭಾಷೆ ದಾರಿಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೂ ಅದು ಬೇಕೆಂದರೆ ನಿಮ್ಮಾಣೆ" ಎನ್ನುತ್ತಾಳೆ ಸತ್ಯಕ್ಕ. ಹೌದು. ಶರಣೆಯರು ಯಾವುದಕ್ಕೂ ನಿಲುಕದ ನಿರ್ಲಿಪ್ತೆಯರು. ಇವರಾರೂ ನಮ್ಮಂತೆ ಶಾಲಾ ಕಾಲೇಜಿಗೆ ಹೋಗಿಲ್ಲ. ಡಿಗ್ರಿಗಳ ಸರಮಾಲೆ ಧರಿಸಿಲ್ಲ. ಆದರೆ ನಾಗರೀಕತೆಯನ್ನು ಮೀರಿಸಿದ ಸುಜ್ಞಾನವಂತರು. ಇದು ಅವರಿಗೆ ದೊರೆತ ಶಿಕ್ಷಣದ ಫಲ.

ಆಶೆಯನ್ನು ಜಯಿಸಿದ ನಿರಾಶೆಯ ಕಿಡಿಗಳು, ಶರಣೆಯರು. ಇಂದು ದುರಾಶೆಯಿಂದ ಕೂಡಿದ ಜನ ಹೆಚ್ಚು ದುಃಖ' ನಿರಾಶೆಗೆ ಈಡಾಗುತ್ತಾರೆ. ತಾವು ಬಡವರೆಂದು ದುಃಖಿಸುವ ಜನಕ್ಕೆ, ತಾವು ಶ್ರೀಮಂತರೆಂದು ಹಮ್ಮಿನಿಂದ ಕೂಡಿದವರನ್ನು ಕುರಿತು "ಮನಶುದ್ಧ ವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧ ವಿರುವವನಿಗೆ ಬಡತನವೆಲ್ಲಿ ಬರಲು ಸಾಧ್ಯ. ಅಷ್ಟಕ್ಕು ಬಡತನ ಬರುವುದುಂಟೆ? ನಾವು ಬಡವರೆಂದು ಕೀಳರಿಮೆಯನ್ನ ಏಕೆ ಬೆಳಸಿಕೊಳ್ಳಬೇಕು. ಈ ನಿಲವು ಅವಳಿಗೆ ಅನುಭವ ಮಂಟಪದಲ್ಲಿ ದೊರೆತ ಶಿಕ್ಷಣದ ಫಲ. ಇಂಥ ಶಿಕ್ಷಣ ನಮ್ಮ ಸ್ತ್ರೀಯರಿಗೂ ದೊರೆತಿದ್ದರೆ ಪತಿ ತಂದಷ್ಟರಿಂದಲೇ ತೃಪ್ತಿ ಪಡುತ್ತಿದ್ದಳು. ಮಕ್ಕಳಿಗೂ ಅಂಥ ಶಿಕ್ಷಣ ಒದಗಿಸುತ್ತಿದ್ದಳು. ಆದರೆ ದುರಾದೃಷ್ಟ ಶ್ರೀಮಂತರ ದೃಷ್ಟಿಯಲ್ಲಿ ಇಂದು ಬಡವರೆಂದರೆ ಪ್ರಾಣಿಗಿಂತ ನಿಕೃಷ್ಟ.

ಅಸ್ಪೃಶ್ಯರೆನಿಸಿದ ಕುಲದಲ್ಲಿ ಜನಿಸಿ ನಡೆಯಲ್ಲಿ ಸ್ಪೃಶ್ಯರಿಗಿಂತಲೂ ಮಿಗಿಲಾದ ಶರಣೆಯರನ್ನು ಅಂದು ಕಾಣದೆ ಇಲ್ಲ. ಪತಿ ಕಳ್ಳನಾಗಿದ್ದಾಗ ಆತನ ಸಹಚಾರಿಯಾಗಿದ್ದ ಸತಿ ಆತ ಮನ ಪರಿವರ್ತನೆಗೊಂಡು ಶರಣನಾದಾಗ ಆತನಂತೆ ತಾನು ಶರಣೆಯಾಗಿ ಇಳಿ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡಿ ವಚನ ರಚಿಸಿ ಎಲ್ಲರಿಗೂ ಮಾರ್ಗದರ್ಶಕಳಾಗಿದ್ದಾಳೆ ಕಾಳವ್ವೆ. ಶರಣೆಯರಿಗೆ ಅಂದು ಜೀವನ ಸಮಸ್ಯೆಯಾಗಿರಲಿಲ್ಲ

ವಿಧವೆಯಾಗಲಿ, ವಿವಾಹವಾಗದಿರಲಿ ಪ್ರತಿಯೊಬ್ಬರು ಒಂದೊಂದು ಕಾಯಕವನ್ನು ಅನುಸರಿಸಿದ್ದರಿಂದ ಸಮಾಜದಲ್ಲಿ ಅವರ ಸಮಸ್ಯೆಗಳೇ ಕಂಡು ಬರುತ್ತಿರಲಿಲ್ಲ. ಸ್ವಾರ್ಥ ರಹಿತ ಸಮಾಜ ಸಮಾನತೆಯ ಆಧಾರದ ಮೇಲೆ ರೂಪಿಸಿದ ಸಮಾಜ ಅಂದಿತು.

ಇಂದು ನಮ್ಮಲ್ಲಿ ಅನೇಕ ಮಹಿಳಾಸಮಾಜಗಳಿವೆ ಸ್ಥಾಪನೆಗೊಳ್ಳುತ್ತಲೂ ಇದೆ. ಎಷ್ಟೋ ಕಡೆ ಸ್ತ್ರೀಯರು ನಿಸ್ವಾರ್ಥ ಪರರಾಗಿ ಕಾರ್ಯ ನಿರ್ವಹಿಸುತ್ತಾರೆಂಬುದು ಸಮಾಜಕ್ಕೆ ತಿಳಿದಿದೆ. ತಾವೆಲ್ಲ ಸಮಾಜಕ್ಕಾಗಿ ಜೀವನವನ್ನು ಮುಡುಪಾಗಿಟ್ಟವರೆಂದು ತಮ್ಮಿಂದಲೇ ಕಾರ್ಯವೆಲ್ಲವೂ ನಿರ್ವಹಿಸುತ್ತಿರುವುದೆಂದು ನಾಟಕವಾಡುತ್ತ ಸಮಾಜದ ಜನರನ್ನು ಮೋಸಗೊಳಿಸಲು ಯತ್ನಿಸುತ್ತಿದ್ದಾರೆ. ಸಮಾಜದಲ್ಲಿ ಶ್ರೀಮಂತಬಡವರೆಂಬ ವರ್ಗಭೇಧವನ್ನು ತಾವೇ ನಿರ್ಮಿಸಿಕೊಂಡಿರುವರು ಎಲ್ಲರನ್ನು ಸಮಾನತೆಯಿಂದ ಕಾಣಬೇಕೆಂಬ ಪಾಠವನ್ನು ಮಕ್ಕಳಿಗೆ ಬೋಧಿಸಿ ಅಂತೆ ಅವರನ್ನು ಬೆಳೆಸಿದ್ದರೆ ದೇಶೋದ್ಧಾರವಾಗುತ್ತದೆ ಇದು ಇಂದು ಕನಸಷ್ಟೆ. ಸ್ತ್ರೀ ಸ್ವಾರ್ಥತೆ ದುರಾಶೆಯಿಂದಕೂಡಿ ಎಲ್ಲ ಸೌಕರ್ಯಗಳು ದೊರೆತರು ತನಗೊಬ್ಬಳಿಗೆ ದೊರಕಬೇಕೆಂಬ ಮನೋಭಿಲಾಶೆಯಿಂದ ಕೂಡಿದ್ದಾಳೆ. ತನಗಿಂತ ಉತ್ತಮರನ್ನ ಕಂಡಾಗ ಅವನ ಬಗ್ಗೆ ದ್ವೇಷ ತಲೆ ಎತ್ತುವುದು. ಸ್ತ್ರೀಯರಲ್ಲಿ ಏಕೆ ಹೀಗೆ? ಆಲೋಚಿಸಿದರೆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ ಇನ್ನು ಮುಂದಾದರು ಸ್ತ್ರೀಯರು ತಮ್ಮ ತಪ್ಪನ್ನು ತಿದ್ದಿಕೊಂಡು ಶರಣೆಯರ ವಚನಗಳನ್ನು ಅಭ್ಯಸಿಸಿ ಅದನ್ನು ಅರಿತು ನಡೆಯಲು ಯತ್ನಿಸಬೇಕು.

ಒಟ್ಟಿನಲ್ಲಿ ಜೀವನದ ಎಲ್ಲ ಮುಖಗಳನ್ನು ಶರಣೆಯರು ಅನುಭವ ಮಂಟಪದಲ್ಲಿ ದೊರೆತ ಶಿಕ್ಷಣದಿಂದ ಪಡೆದಿದ್ದರು. "ಗಿಳಿಯೋದಿ ಫಲವೇನು? ಬೆಕ್ಕು ಬಹುದ ತಿಳಿಯದು." ಎಂಬಂತೆ ಕೇವಲ ನಾಲ್ಕಾರು ಗ್ರಂಥಗಳನ್ನು ಓದಿದರೆ ಪ್ರಯೋಜನವಿಲ್ಲ. ಜೀವನದ ಮೌಲ್ಯಗಳನ್ನು ಒಳಗೊಂಡ ಶಿಕ್ಷಣ ಇಂದು ಅವಶ್ಯಕ. ಇಂಥ ಶಿಕ್ಷಣ ಹೆಣ್ಣುಮಕ್ಕಳಿಗೆ ಶರಣೆಯರಿಂದ ದೊರಕುವುದು ಇನ್ನು ಮುಂದಾದರು ನಮ್ಮ ಮಕ್ಕಳಿಗೆ ಶರಣರ ವಚನಗಳ ಅಭ್ಯಾಸವನ್ನು ಜೊತೆಗೆ ಆ ತತ್ವದ ಅಡಿಗಲ್ಲ ಶಿಕ್ಷಣವನ್ನು ತಾಯಂದಿರು ಬೋಧಿಸಿದರೆ ಮುಂದಿನ ಪೀಳಿಗೆಯವರಾದರೂ ನ್ಯಾಯ ಧರ್ಮ, ನಿಷ್ಠುರ, ನಿಸ್ವಾರ್ಥ ಪರರಾಗುವರೇನೊ? ಕಾದು ನೋಡಬೇಕು. ●

# ಅಥಣಿ ಶಿವಯೋಗಿ

## "ಲಿಂಗವಿಲಾಸ ಗೀತೆ"

— ಕನ್ನಡಕವಿ ಕಾಳಿದಾಸ

ಸ.ವೃತ್ತ॥ ಶ್ರೀಮದಥಣಿ ಗಚ್ಚಿನಮಠಾಬ್ಜ ಹಂಸಂ ಮಹಿಮೋದ್ಧಾಮ ಕೈವಲ್ಯ—
ಧಾಮ ಭಕ್ತಿಜ್ಞಾನ ವಿರತಿ ಪ್ರಾಣ ಸ್ವಾನುಭಾವ ಪೂರ್ಣ ವಿಶ್ವ-
ಪ್ರೇಮಯುಕ್ತ ಪ್ರಮಥಾಚಾರ ಶಿವತತ್ವಸಾರಭರಿತ
ನೇಮದಿಂ ಲಿಂಗತಪಗೆಯ್ದು ರಾಜಿಪಂ ಮುರುಘೇಂದ್ರ ಶಿವಯೋಗಿ ॥1॥

ತೇಜವಾದ ಕಾಯಕಾಂತಿ ಪ್ರಸನ್ನ ಮುಖಮುದ್ರಾ ಪೂರ್ಣಶಾಂತಿ
ನಳಿನದಂತೆಸೆಯೆ ನೇತ್ರವಾಣಿ ಮೌಕ್ತಿಕಮೆನೆ ಸುಲಿಪಲ್ಲುಗಳ ಪಂಕ್ತಿ
ಪೊಳೆಯುತಿರೆ ಶಿವಯೋಗಿ ಬೆಳಗುವಂ ಕೈಲಾಸದಾ ಶಿವತಾನೆ
ಇಳೆಗಿಳಿದು ಬಂದಂತೆ ಭೂಕೈಲಾಸಮಾಗಿರ್ದಥಣಿ ಕ್ಷೇತ್ರದೊಳು ॥2॥

ಪರಮ ಪುಣ್ಯ ತಪೋವನಮೆನಿಪ ಗುಹೇಶ್ವರ ಗಡ್ಡೆಯೊಳ್ ನೆಲೆಸಿ
ಪರಯೋಗ ದೃಷ್ಟಿಯುಂಬಲಿಸಿ ಪರಮಾನಂದ ಲೀಲೆಯೊಳಿರಲ್
ಉರಗ ತಾನಾಗಮಿಸಿ ಹೆಡೆಯೆತ್ತಿ ಕುಣಿಯುತಿರೆ ತವಸಮ್ಮುಖದಿ
ಪುರಜನಕೆ ಭಯವಾಗೆ ಸರ್ಪಮರಳಿ ಬರದಂತೆ ಕೃಪೆಗೆಯ್ದು ಯೋಗಿ ॥3॥

ಮತ್ತೆ ನೀನಂ ಕಲಿಗೆಯಡವಿ ಸ್ವಾಮಿ ಮಠಕಾಗಮಿಪ ದಾರಿಯಲಿ
ಎತ್ತರದ ಪರ್ವತದಾ ಭಯಂಕರ ಗುಹೆಯೊಳಗಿಂದಲಾರ್ಭಟ—
ಸುತ್ತೆ ಬಂದಿರ್ದ ವ್ಯಾಘ್ರ ನಮಿಸಿ ಶಿವಯೋಗಿ ಸಂತಸದಿ ಚೆಲ್ಲಿರುವ
ಉತ್ತುತ್ತೆ ಫಲವನ್ನೆ ಮೂಸಿಪ ಪುಲಿಯು ಪೋಗಲ್ಕೆ ನೀ ತೆರಳಿದೆಯ್ ॥4॥

ಶಿವಯೋಗಿಯನುಗ್ರಹಮಂ ಪೊಂದಿರ್ದ ಸಿದ್ಧಲಿಂಗಸ್ವಾಮಿ ತಾ
ಶಿವಕಾರ್ಯದಲ್ಲಿ ನಿರತನಾಗಿರಲ್ ಗುರುವಿನಾಣತಿಯಂತೆ
ಶಿವಪೂಜೆ ಪೂರೈಸಿ ಶಿವಯೋಗೀಶ ಹೊರಬಂದು ನಿರೀಕ್ಷಿಸುತಿರೆ
ತವೆ ಗಗನದಿಂದಿಳಿದ ಪಕ್ಷಿಗಳೆರಡು ಕುಳಿತಿಹವು ಬಕುಳ ವೃಕ್ಷದಲಿ ॥5॥

ಶಿವಯೋಗಿ ಮುರುಘಾರ್ಯರ್ ಭಯ ಭಕ್ತಿಯಿಂ ಕೈಮುಗಿದು ಸಮಿಪಲ್ಕೆ
ಭುವಿಗಿಳಿದು ಪಕ್ಷಿರೂಪದೊಳೈತಂದು ಗುರುವರ್ಯರೀರ್ವರ್
ಸವಿದರ್ಶನವನಿತ್ತು ಪೋಗುವರಿವರೆ ಮರುಳಶಂಕರ ಸ್ವಾಮಿಗ-
ಳವಿರತಂ ಗುರುಶಾಂತ ಸ್ವಾಮಿಗಳು ತ್ರಿಕಾಲ ಜ್ಞಾನಮೂರ್ತಿಗಳು ॥6॥

ಸವದತ್ತಿ ಪುರಾಣ ಸಮಾಪ್ತಿಗಾಗಿ ನೀ ಬಿಜಯಂಗೆಯ್ದಿರಲು
ಶಿವಾನುಭಾವಿ ಬಿದರಿ ಕುಮಾರಯೋಗಿಯಾ ಸಂಪ್ರೀತಿಗಾಗಿ
ಕವಿದಿರ್ದ ಕತ್ತಲೆಯಲಿ ಕುಳ್ಳಿರ್ದ ಗಾಡಿಯಾ ಚಕ್ರಗಳೆರಡು
ತವೆನಿದ್ರೆ ಹೋಗಿಹನೆದೆಯ ಮೇಲ್ ಹಾಯಲ್ಕಾಗ ಗೆಯ್ದೆ ಪ್ರಾಣದಾನ ॥7॥

ಬಸವಾದಿ ಪ್ರಮಥರ್ ನಡೆದ ಮಾರ್ಗದಲಿ ಆಚರಿಪ ಶಿವಯೋಗಿ
ಅಸಮಾಕ್ಷನನುಜ್ಞೆಯೊಳವತರಿಸಿ ಧರೆಯ ಪಾವನಗೊಳಿಸಿದೆಯ್
ವಸುಧೆಯನೆ ಪೊತ್ತ ಶೇಷಂಗಸದಳ ಮಾಗೆ ತವಮಹಿಮೆ ಬಣ್ಣಿಪುದು ಕೃಪೆಯ
ಶಿಶುವಾಗಿ ಯಶೋಗೀತೆಯಂ ಪಾಡುವನು "ಕನ್ನಡ ಕವಿ ಕಾಳಿದಾಸ" ॥8॥

# ಜ್ಯೋತಿರ್ಲಿಂಗ ದರ್ಶನ

— ಕನ್ನಡ ಕವಿ ಕಾಳಿದಾಸ

ದಿ|| 28-3-84 ರ ಬೆಳಗಿನ ಜಾವದಲ್ಲಿ ಒಂದು ದಿವ್ಯ ದೃಷ್ಟಾಂತವಾಯಿತು. ಅದುವೇ ಶಿವಶರಣ ಶಿಶು "ಕನ್ನಡ ಕವಿ ಕಾಳಿದಾಸ" ನು ಕಂಡ "ಜ್ಯೋತಿರ್ಲಿಂಗ ದರ್ಶನ". ಶಿವಸುಖ ಶಾಂತಿರಹಸ್ಯ ತತ್ವ ಸ್ವಪ್ನವಿದು. ಭೂಕೈಲಾಸವೆನಿಸಿದ ಮದಥಣಿ ಶ್ರೀ ಗಚ್ಚಿನ ಮಠದ ಶ್ರೀ ಶ್ರೀ ಶಿವಯೋಗಿ ಮಹಾ ತಪಸ್ವಿಗಳವರಜೀವಂತ ಸಮಾಧಿ ಅಥವಾ ಮಹಾ ಚೈತನ್ಯಾತ್ಮಕ ಅತ್ಯಂತ ಪುಣ್ಯಪ್ರದ ಅಭೀಷ್ಟ ದಾಯಕವಾದ ಮಹಾಕರ್ತೃ ಗದ್ದಿಗೆ. ಈ ಗದ್ದುಗೆಯು ಷಣ್ಮುಖಿಬೆಲ್ಲಿ–ಶರಣಲಿಂಗ ತಪೋನಿಷ್ಠರೂ, ವೇದ ವಾಙ್ಮಯೋತ್ಪತ್ತಿ ಜ್ಞಾನವೃದ್ಧರೂ ನಮ್ಮ ಶ್ರೀ ಮೋಟಗೀ ಮಠಾಧ್ಯಕ್ಷರೂ ಆದ ಶ್ರೀ ನಿ. ಪ್ರ. ಸ್ವರೂಪಿಗಳಾದ ಪರಮ ಪೂಜ್ಯ ಶ್ರೀ ಗುರುಬಸವ ಮಹಾಸ್ವಾಮಿಗಳವರು—ಆ ತಪೋನಿಧಿಗಳಾದ ಮಹಾ ಶಿವಯೋಗಿಗಳವರು ಸಮಾಧಿಯಿಂದ ಎದ್ದು ಹೊರಬಂದು ಇಷ್ಟಲಿಂಗ ಪೂಜೆಗೆಯ್ಯುತ್ತ ಕುಳಿತಿರುವರೋ ಏನೋ ಎಂದು ಭಾಸವಾಗುವಂತೆ - ತಮ್ಮ ಕರಕಂಜದಲ್ಲಿ ರಾಜಿಸ ಇಷ್ಟಲಿಂಗ ಧ್ಯಾನಾಸಕ್ತರಾಗಿ ನೆಟ್ಟದೃಷ್ಟಿನೋಟದಲ್ಲಿ ಕುಳ್ಳಿರ್ದು ತೇಜಸ್ತೇಜಿಯಾಗಿ ಕಂಗೊಳಿಸುತ್ತಲಿದ್ದಾರೆ.

ಅಲ್ಲಿಯೇ ಬದಿಗಿನ ಕಟ್ಟೆಯ ಬಳಿನಿಂದ ಕವಿಯು ಅತ್ಯಂತ ಭಯ ಭಕ್ತಿ ಆನಂದ ಹೃದಯಿಯಾಗಿ ಈ ಅಮೃತ ಗಳಿಗೆಯಲ್ಲಿನ ದಿವ್ಯ ಭವ್ಯ ಮಹಾ ಲಿಂಗಾಂಗಸಾಮರಸ್ಯ ಯುಕ್ತವಾದ ಶಿವಯೋಗ ಸಂಜೀವಿನೀ ಸನ್ನಿವೇಶವನ್ನು ನೋಡುತ್ತಲಿದ್ದಂತೆಯೇ ಎದುರಿಗಿದ್ದ ಧೂಪಾರತಿಯಲ್ಲಿ- ಆ ಶ್ರೀಗಳವರ ಕರಕಂಜದಲ್ಲಿನ ಪ್ರತಿಮೂರ್ತಿ ಆ ಇಷ್ಟಲಿಂಗ ದೇದೀಪ್ಯಮಾನವಾಗಿ ಪ್ರಕಾಶಿಸುತ್ತ ಜ್ಯೋತಿರ್ಲಿಂಗವಾಗಿ ಉರಿಯುತ್ತಲಿದ್ದಿತು. ಈ ಶತದಲ ಮಹಾಬೆಳಕಿನ ಮಧ್ಯದಲ್ಲೂ ಆ ಕಪ್ಪುಕಾಂತಿಯ ಇಷ್ಟಲಿಂಗವು ಸ್ಪಷ್ಟವಾಗಿ ತೋರುತ್ತಲಿದ್ದಿತು; ಅಂತೆಯೇ ಆ ಇಷ್ಟಲಿಂಗವು ಇಂತಪ್ಪ ಸ್ವಸ್ವರೂಪವಾಂತು ಕೋಟಿ ರವಿಪ್ರಕಾಶದಲ್ಲಿ ಬೆಳಗುತ್ತಲಿದ್ದಿತು. ವೀಕ್ಷಿಸುತ್ತ ನಿಂತಿದ್ದ ಕವಿಯ ಹೃದಯ ಶರಧಿಯಲ್ಲಿ ಬುದ್‌ಬುದಾಯಮಾನವಾದ ಆನಂದಲಹರಿ ಅಸಂಖ್ಯ ತೆರೆಗಳೇಳುತ್ತಲಿದ್ದವು. ಆ ಮಹಾಪರ್ವಕಾಲದ ಅಮೃತಗಳಿಗೆಯಲ್ಲಿ, ಈ ಅದ್ಭುತ ಶಾಂತಿಸಾಗರ ಮಹಾ ಸನ್ನಿವೇಶ ಇದೊಂದು ಶಿವಯೋಗ ಭಕ್ತಿಪರಾಕಾಷ್ಠೆಯ ಪ್ರತೀಕ ಅಥವಾ ಪರವಸ್ತು ಪರಶಿವ ಸಾಕಾರ ಸ್ವರೂಪ; ಮಹಾಲಿಂಗ ರೂಪ.

ಹೀಗೆ ಶ್ರೀ ಶ್ರೀ ಮುರುಘೇಂದ್ರ ಮಹಾಶಿವಯೋಗಿ ಸಜೀವ ಸಮಾಧಿಯ ಬಳಿ ಕುಳಿತು ಲಿಂಗತಪಸ್ಸಾಮ್ರಾಜ್ಯದಲ್ಲಿ ಅಂತರ್ಮುಖಿಗಳಾಗಿದ್ದು ಶಾಂತಿಸಾಗರದಲ್ಲಿ ನಲಿಯುತ್ತಲಿದ್ದ ಶ್ರೀ ಮೋಟಗಿ ಮಠದ ಪೂಜ್ಯ ಶ್ರೀ ಗುರುಬಸವ ಮಹಾಸ್ವಾಮಿಗಳವರು ಬಹಿರ್ಮುಖರಾಗಿ ಲಿಂಗಾನುಷ್ಠಾನವನ್ನು ತೀರ್ಚಿ ಹೊರಗಡೆ ಹೊರಳಿ, ಶಿವಯೋಗ ನಿದ್ರಾಮುದ್ರೆಯಿಂದ ಎಚ್ಚೆತ್ತು ಅವರು ಅರೆನೇತ್ರಕಮಲಗಳರಳಿದ ಪ್ರಸನ್ನ ಮುಖವಾಂತ ದಿವ್ಯದೃಷ್ಟಿಯಿಂದ ನೋಡಿದಾಗಲೇ - ಅಲ್ಲಿಯೇ ಬದಿಗಿನ ಕಟ್ಟೆಯ ಮೇಲೆ ನಿಂತು ಇಂತಹ ಮಹಾ ಪುಣ್ಯಪ್ರಸವಾದ ಪವಿತ್ರತಮ ಅಮೃತವೃಷ್ಟಿಯ ದಿವ್ಯ ದೃಶ್ಯವನ್ನು ಕಂಡು ಆನಂದ ಬಾಷ್ಪಗಳನ್ನು ಸುರಿಸುತ್ತಲಿದ್ದ ಆ ಕವಿಯಮೇಲೆ ಆ ಪೂಜ್ಯ ಶ್ರೀಗಳವರ ಆ ಪವಿತ್ರ ದೃಷ್ಟಿ ಬಿದ್ದಿತು. ತತ್‌ಕ್ಷಣವೇ ಕೈಸನ್ನೆಯಿಂದ ಕವಿಯನ್ನು ಕರೆದು ಶ್ರೀಶ್ರೀಗಳವರು- "ಮೃದುಲ ಸ್ವರದಲ್ಲಿ" ನಿಮ್ಮ ಧರ್ಮಪತ್ನಿ ಒಳಗಡೆ ಎಡೆ ಪ್ರಸಾದ ತಂದಿರಿಸಿದ್ದಾರೆ, ತೆಗೆದುಕೊಂಡು ಬನ್ನಿ ಎಂದು ಅವನಿಗೆ ತಿಳಿಸಿದರು. ಆ ಕೂಡಲೇ ಕವಿಯು ಶ್ರೀ ಮೋಟಗಿಮಠದ ಗುರುಮಠದೊಳಗಿಂದ ಆ ಪ್ರಸಾದದೆಡೆಯನ್ನು ತರಲು ಧಾವಿಸಿ ಹೋಗುತ್ತಿದ್ದಂತೆ ಬೆಳಕು ಹರಿದು ಕವಿಯು ಜಾಗೃತನಾದ. ಅಂತೆಯೇ ಪರಮಪೂಜ್ಯರಿಗೆ ಭಕ್ತಿನಿರ್ಭರತೆಯಲ್ಲಿ ಕವಿರಾಜ ಪ್ರಸಾದದೆಡೆಯನ್ನು ತಲ್ಪಿಸಿದ. ಆನಂದಾಂಬುಧಿಯಲ್ಲಿ ಮುಳುಗೇಳ್ದ ಕೃತಾರ್ಥನಾದ.

ಇದಿಷ್ಟು 'ಜ್ಯೋತಿರ್ಲಿಂಗದರ್ಶನ' ಪಡೆದ ಮತ್ತು ಶಿವಯೋಗಲೀಲಾ ವಿಲಾಸಾಮೃತ ವೃಷ್ಟಿ ವೈಭವ ಸುಖಾನುಭವವನ್ನು ಕಂಡುಂಡ "ಕನ್ನಡ ಕವಿ ಕಾಳಿದಾಸ"ನ ಶಿವತತ್ವ ರಹಸ್ಯಾತ್ಮಕ ಶ್ರೀ ಗುರುಬಸವ ಮಹಾಸಾಗರ ಕೃಪೆಯಾಂತ ನಿತ್ಯ ನಿರಂಜನ ಸತ್ಯ ಸ್ವಪ್ನ ಸುವಿಚಾರ. ಈ ಜ್ಯೋತಿರ್ಲಿಂಗದಂತರ್ವಾಣಿಯೇ "ಶ್ರೀ ಗುರುಬಸವಲಿಂಗ ಸೂಕ್ತಮ್" ಮಹಾ ಕಾವ್ಯಾಮೃತಂ ಕೃತಿರತ್ನ. ಕಾವ್ಯಲೋಕದಲ್ಲಿ ರವಿತೇಜವಾಂತು ಬೆಳಗುತ್ತಲಿಹುದು.

# ಹಳೆಯ ವಿದ್ಯಾರ್ಥಿಗಳ ಸಂಘಕ್ಕೆ 'ಶಾಶ್ವತ' ಸದಸ್ಯತ್ವ ಪಡೆದಿರುವವರು

**ಸರ್ವಶ್ರೀ:-**

76 ಹೆಚ್. ಸಿದ್ದಲಿಂಗಯ್ಯ, ಉಪಾಧ್ಯಾಯರು, ಕರಿಮಣ್ಣೆ, ನರಸೀಪುರ ಪೋಸ್ಟ್, ನೆಲಮಂಗಲ ತಾಲ್ಲೂಕು.

77 ಶ್ರೀ ಶ್ರೀ ಮಹಂತ ಸ್ವಾಮಿಗಳು, ದೊಡ್ಡಕೊಡಲಿ ಮಠ, ಕೊಡ್ಲಿಪೇಟೆ ಪೋಸ್ಟ್, ಉತ್ತರ ಕೊಡಗು ಜಿಲ್ಲೆ-571231.

78 ರಾಜಶೇಖರಯ್ಯ, ಮಾರುಕಟ್ಟೆ ಸಹಾಯಕ, T.A.P.C.M.S. ಲಿಮಿಟೆಡ್, ಹೊಸಕೋಟೆ.

79 H. C. ಹೊನ್ನಯ್ಯ, ನಂ. 260, 4ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010.

80 M. B. ಗುರುಸಿದ್ದಯ್ಯ, ಉಪಾಧ್ಯಾಯರು, ದೇಶ್ವಾರ ಪೇಟೆ, ನಂ. 419, ಗುಬ್ಬಿ.

81 G. ಪರಮೇಶ್ವರಪ್ಪ, ನಂ. 884, 3ನೇ ಕ್ರಾಸ್, M. C. ರೋಡ್, ಬೆಂಗಳೂರು-560040.

82 ಸದಾಶಿವಯ್ಯ, ಅರ್ಜುನ ಬೆಟ್ಟಹಳ್ಳಿ, ಗೊಲ್ಲಹಳ್ಳಿ ಪೋಸ್ಟ್, ನೆಲಮಂಗಲ ತಾಲ್ಲೂಕು.

83 K. B. ಶಿವಗಂಗಣ್ಣ, ನಂ. 3467/1, ಕುರಿಪಾಳ್ಯ, ತುಮಕೂರು-1.

84 H. T. ಲಿಂಗಪ್ಪ, ಸಂಸ್ಕೃತ ಪಂಡಿತರು, ಸನಿವಾಸ ಪ್ರೌಢಶಾಲೆ, ಸಿದ್ಧಗಂಗಾ ಮಠ.

85 H. H. ನರಸಿಂಗರಾವ್, ನಂ. 527, 7ನೇ ಮುಖ್ಯ ರಸ್ತೆ, ಹನುಮಂತ ನಗರ, ಬೆಂಗಳೂರು-4.

86 S. ಚಂದ್ರಶೇಖರಯ್ಯ, ಕನ್ನಡ ಪಂಡಿತರು, ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ನಾರಸಂದ್ರ, ಮಾಗಡಿ ತಾಲ್ಲೂಕು.

(ಮುಂದುವರಿಯುತ್ತದೆ)

# ವಿದ್ಯಾರ್ಥಿಗಳಿಗೆ ಶಿಸ್ತಿರಬೇಕೇ ?

— ಬಿ. ಎಸ್. ಕೃಷ್ಣಮೂರ್ತಿ
ನಂ. 5 ಸೀತಾವಿಲಾಸ ರಸ್ತೆ, ಮೈಸೂರು-57001.

"ಶಿಸ್ತಿರಬೇಕೇ ವಿದ್ಯಾರ್ಥಿಗಳಿಗೆ ?
ನಿಜ! ಶಿಸ್ತಿರಲೇಬೇಕು!! ಶಿಸ್ತು ಅವರ ಮುಂದಿನ ಪ್ರಗತಿಯ ದ್ಯೋತಕವಾಗಿದೆ!!!

ಶಿಸ್ತು ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಲ್ಲ. ತಮ್ಮ ಏಳಿಗೆಗೆ ಪಂತಪಿಸುವ ಎಲ್ಲಾ ನಾಗರೀಕ ಪುರುಷರಿಗೂ ಸ್ತ್ರೀಯರಿಗೂ ಅವಶ್ಯವಾಗಿ ಬೇಕೇಬೇಕು.
"ಶಿಸ್ತು" ಅಂದರೇನು ?

"ಶಿಸ್ತು" ಭಾರತೀಯ ಗುರು-ಶಿಷ್ಯ ಪರಂಪರೆಯಲ್ಲಿ ಹಾಸುಹೊಕ್ಕಾಗಿ ಬಂದಿದ್ದ ಒಂದು ಶ್ರೇಷ್ಠ ಸಂಪ್ರದಾಯ. ಗುರು ಹೇಳಿದಂತೆ ಶಿಷ್ಯರು ಸರ್ವಕಾರ್ಯಗಳಲ್ಲೂ ಅನುಸರಿಸಿ ನಡೆಯುತ್ತಿದ್ದರೆಂದು ಹಿಂದಿನವರ ದಾಖಲೆಗಳಿಂದ ಅಭಿವ್ಯಕ್ತವಾಗಿದೆ. ಈಗಂತೂ ಈ ಶಿಸ್ತು ಅನ್ನುವ ಪದ ಮೂಲೋತ್ಪಾಟನವಾಗಿವೆ. ಗುರುವಿಗೂ ಶಿಸ್ತಿನ ಧ್ಯೇಯ ತಪ್ಪಿಹೋಗಿದೆ. ಶಿಷ್ಯರಿಗಂತೂ ಬೇಡದ ಪದ !

ಒಟ್ಟಾರೆ ಹೇಳಬೇಕೆಂದರೆ 'ಶಿಸ್ತು' ಅನ್ನುವುದು ನಿಶ್ಚಿತ ವೇಳೆಯಲ್ಲಿ, ನಿಘಂಟಾಗಿ ಮಾಡುವ–ಮಾಡಬೇಕಾದ ನಿಯಮ! ಇದು ಕ್ರಮವಾಗಿ ಅಭ್ಯಾಸಬಲದಿಂದ ಬರಬೇಕು. ಇದರ ಗುರಿ ತಮ್ಮ ಧ್ಯೇಯ ಸಾಧನೆಯಲ್ಲಿ ನಿಶ್ಚಿತವಾಗಿರಬೇಕು. ಇದನ್ನೇ ಇಂಗ್ಲೀಷಿನಲ್ಲಿ "Discipline" ಅನ್ನುತ್ತಾರೆ.

ನಮ್ಮ ಪೂರ್ವಿಕರು ಕಾಲಕಾಲಕ್ಕೆ ನಿಶ್ಚಿತ ವೇಳೆಯಲ್ಲಿ ತಮ್ಮ ಸದ್ಧರ್ಮಾಚರಣೆಗಳನ್ನು ಆಚರಿಸುತ್ತಿದ್ದರೆಂದು ಹಿರಿಯರು ಹೇಳುತ್ತಾರೆ. ಇದರಿಂದ ಅವರು ಶ್ರೇಯಸ್ಸನ್ನು ಪಡೆದರೆಂದು ಗ್ರಂಥಗಳಿಂದ ತಿಳಿಯುತ್ತೇವೆ.

ಶಿಸ್ತು ತಾಯ್ತಂದೆಗಳಿಂದ ಮಕ್ಕಳಿಗೆ ಕ್ರಮವಾಗಿ ಬರಬೇಕಾಗಿದೆ. ಅವರು ಶಿಸ್ತಿಲ್ಲದವರಾದರೆ ಮಕ್ಕಳಿಗೆ ಬರುವುದಾದರೂ ಹೇಗೆ?

ಪಾಶ್ಚಾತ್ಯರು ತಮ್ಮ ಮಕ್ಕಳು ಎಳೆಯವರಾಗಿರುವಾಗಲೇ ಶಿಸ್ತಿನ ಪಾಠವನ್ನು ಕಲಿಸುವುದು ಅವರ ಸುಸಂಸ್ಕೃತಿಯ ಕ್ರಮ! ಆ ಮಕ್ಕಳು ತಾಯ್ತಂದೆಗಳು ಇಟ್ಟ ಹೆಜ್ಜೆಯಲ್ಲೇ ನಡೆಯುವುದು ಪಾಠವಾಗುತ್ತದೆ. ಇದರಿಂದ ಅವರ ಗುರಿ - ಸಾಧನೆ ನಿಶ್ಚಯವಾಗಿಯೂ ಆಗಿಯೇ ಆಗುತ್ತದೆ.

ಹಿಂದಿದ್ದ ಶಿಕ್ಷಣವೇತ್ತರು, ತತ್ವಜ್ಞಾನಿಗಳು, ಶೈಕ್ಷಣಿಕ ವಿಜ್ಞಾನಿಗಳು, ಇಂಜಿನೀಯರುಗಳು, 'ಶಿಸ್ತಿ'ನ ಕ್ರಮದಲ್ಲಿ ವಿದ್ಯಾಬೋಧನೆ ಮಾಡಿದರೆಂಬುದು ಸುಳ್ಳಲ್ಲ. "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ?" ಆದ್ದರಿಂದ ವಿದ್ಯಾರ್ಥಿಗಳು ತಾವು ವ್ಯಾಸಂಗಿಗಳಾಗಿರುವಾಗಲೇ ಈ ಶಿಸ್ತಿನ ಮಾರ್ಗವನ್ನು ನಿಷ್ಠೆಯಿಂದ ಪಾಲಿಸಬೇಕು. ಇದಕ್ಕೆ ಬೋಧಕರ ಪ್ರೇರಣೆ, ಪ್ರೋತ್ಸಾಹ ಬೇಕೇಬೇಕು!

ಶಿಸ್ತೆಂಬುದು ದೊಡ್ಡ ಕಲ್ಯಾಣಗುಣ! ಶಿಸ್ತಿನ ಪಾಠವನ್ನು ಕಲಿತು ಅದರಿಂದಾದ ಮಹಾ ಪ್ರಯೋಜನವನ್ನು ಕಂಡವರು, ಬೇರೆಯುವರು ಈ ಬಗ್ಗೆ ಶಿಸ್ತನ್ನು ಪಾಲಿಸದಿದ್ದಾಗ, ತಮಗೆ ಅದರಿಂದಾದ ಕಾರ್ಯಭಂಗಕ್ಕೆ ಕಿಡಿಕಿಡಿಯಾಗುತ್ತಾರೆ. ಶಿಸ್ತನ್ನು ಬಲೋದ್ಬಂಧವಾಗಿ ಹೇರಲ್ಪಡತಕ್ಕದ್ದಲ್ಲ. ಮನಸ್ಸಿನ ಸ್ಫೂರ್ತಿ ಉದ್ಭವಿಸಿ, ಈ ಸದ್ಗುಣವು ಉಕ್ಕಿ ಬರುತ್ತದೆ. ಆಗ ಇದನ್ನು ತಮ್ಮ ಕೀರ್ತಿ ಕಳಶಪ್ರಾಯವಾಗುತ್ತದೆಂದು ತಿಳಿದು, ಅದರ ಅನುವರ್ತನೆಯನ್ನು ಮಾಡಬೇಕು.

ಕೆಲವರು ನೇಮಿತ ಕಾಲಗಳಲ್ಲಿ ಓದು, ಸ್ನಾನ, ತಿಂಡಿ, ಊಟ, ನಿದ್ರೆ ಮಾಡುವುದರಿಂದ ಇದು ಶಿಸ್ತಲ್ಲವೇ ಎಂದು ಕುಹಕವಾಡುತ್ತಾರೆ. ಇನ್ನು ಕೆಲವರು ಸಕಾಲಕ್ಕೆ ಮನೆಬಿಟ್ಟು ಶಾಲಾ-ಕಾಲೇಜುಗಳಿಗೆ ಸಕಾಲಕ್ಕೆ ಹೋಗುತ್ತಾರೆ. ಉಪಾಧ್ಯಾಯರು ಹೇಳಿದ್ದನ್ನು ಕೇಳಿ ಶಾಲಾವೇಳೆ ಮುಗಿದಾಗ ಮನೆಗೆ ಬರುತ್ತಾರೆ. ಇದನ್ನೂ ಶಿಸ್ತೆಂದು ಅನ್ನುವುದೇ?

ಇನ್ನು ಕೆಲವು ವಿದ್ಯಾರ್ಥಿಗಳು ಯಾರ ತಂಟೆಗೂ ಹೋಗದೆ, ಜಗಳವಾಡದೆ, ಮೌನದಿಂದಿರುತ್ತಾರೆ. ಯಾರಿಗೂ ತೊಂದರೆ ಕೊಡದೆ ನಿರುಪದ್ರವಿಗಳಾಗಿರುವರು! ಹೀಗಿದ್ದರೆ ಇದನ್ನೂ ಶಿಸ್ತೆಂದು ಅನ್ನೋಣವೇ?

"ಇಲ್ಲ" ಎಂದಿಗೂ ಈ ಬಗೆಯ ಆಚರಣೆ ಶಿಸ್ತೆಂದು ಹೇಳಲಾಗದು. ಹೇಳಿದರೆ ನಗೆಪಾಟಲಾಗುತ್ತದೆ. ವಿದ್ಯಾರ್ಥಿಗಳು ಗೌರವದ ಪ್ರಜೆಯಾಗಲೇಬೇಕಾದರೆ, ನಾಗರೀಕತೆ ಉಳಿಯಬೇಕಾದರೆ, ದೇಶದ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ, ಶಿಸ್ತಿನ ಜಾಡು ಹಿಡಿದು ಮುನ್ನಡೆಯಬೇಕು. ವಿದ್ಯಾಭ್ಯಾಸವು ಪೂರೈಸಿದ ನಂತರ ತಮ್ಮ ಏಳಿಗೆಯ ನಂತರದ ದಾರಿಯನ್ನು ಕಂಡುಕೊಳ್ಳಬೇಕಲ್ಲದೆ, ದೇಶದ ಉದ್ಧಾರಕ್ಕೂ ಕಂಕಣಬದ್ಧರಾಗಬೇಕು.

ಇದನ್ನು ಸಾಧಿಸುವುದಕ್ಕಾಗಿ ಆರ್ಥಿಕ, ಸಾಮಾಜಿಕ, ಭೌತಿಕ, ಸಾಂಸ್ಕೃತಿಕ, ತಾಂತ್ರಿಕ ರಂಗಗಳಲ್ಲೂ ವಿದ್ಯಾರ್ಥಿಗಳು ಪಾಲ್ಗೊಳ್ಳಬೇಕು. ದೇಶೋದ್ಧಾರ, ಸಮಾಜ ಕಲ್ಯಾಣ, ಆಶ್ರಿತ ಜನರಕ್ಷಣೆ, ಇವುಗಳ ಬಗ್ಗೆ ಸದಾ ಕಾರ್ಯತತ್ಪರರಾಗಬೇಕು.

ಆದರೆ ಈಗ ವಿದ್ಯಾರ್ಥಿಗಳಲ್ಲಿ ಬಹಳಮಟ್ಟಿಗೆ ಅಶಿಸ್ತೇ ತಾಂಡವವಾಡುತ್ತಿದೆ. ಏಕೆ ಹೀಗಾಯಿತು? ಇದಕ್ಕೆ ಕಾರಣವೇನು?

ಕೇಳಿ! ವಿದ್ಯಾರ್ಥಿಗಳ ಅಶಿಸ್ತಿಗೆ ಅನೇಕ ಕಾರಣಗಳಿವೆ. ಅವರಿಗೆ ಏನೇನೋ ಆಶೋತ್ತರಗಳಿರುತ್ತವೆ. ಅವು ನೆರವೇರದಿದ್ದಾಗ ರೊಚ್ಚಿಗೆದ್ದು ಧಾಂದಲೆಗಳನ್ನೆಬ್ಬಿಸುತ್ತಾರೆ. ಕೆಲವು ರಾಜಕಾರಣಿಗಳು ವಿದ್ಯಾರ್ಥಿಗಳನ್ನು ತಮ್ಮ ಸುಖಕ್ಕಾಗಿ, ತಮ್ಮ ಆಸೆ ನೆರವೇರಿಸಿಕೊಳ್ಳಲು ವಿದ್ಯಾರ್ಥಿಗಳಿಗೆ ಪ್ರೇರಿಸಿ, ತಪ್ಪುದಾರಿಗೆ ಎಳೆಯುವುದೇ ಅವರ ನೀತಿಯಾಗಿದೆ.

ನೀತಿಬಾಹಿರರ ವಚನಗಳಿಗೆ ವಿದ್ಯಾರ್ಥಿಗಳು ಸೊಪ್ಪು ಹಾಕದೆ, ತಮ್ಮ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡರೆ ವಿವೇಕವಂತರಾಗುವರು. ಬಾಲ ಬಡುಕರ ಜೊತೆ ಸೇರದೆ ನ್ಯಾಯಮಾರ್ಗದಲ್ಲಿ ನಡೆದರೆ ಶ್ರೇಯಸ್ಸುಂಟು.

ವಿದ್ಯಾರ್ಥಿಗಳಿಗೆ ರಾಜಕೀಯದ ಗಂಧವೇ ತಿಳಿಯದಿರುವಾಗ ಅದರ ಗೊಂದಲಕ್ಕೆ ಸಿಕ್ಕಿ ಸಾರ್ವಜನಿಕರಿಂದ "ಛೀ" ಅನ್ನಿಸಿಕೊಂಡು ನಗೆಪಾಟಲೆಗೆ ಗುರಿಯಾಗುವುದು ತಿಳಿಗೇಡಿತನವಲ್ಲವೇ, ಊಹಿಸಿ?

ಆದ್ದರಿಂದ ಅಶಿಸ್ತಿನ ದಾರಿ ಹಿಡಿಯದೆ, ಉನ್ನತಿಗಾಗಿ ಶಿಸ್ತನ್ನು ಪಾಲಿಸುವುದು ಬುದ್ಧಿವಂತರ ಲಕ್ಷಣ. ಶಿಸ್ತು ತಪ್ಪಿದ ಕಾರಣದಿಂದ ಅನೇಕ ಕಾರ್ಖಾನೆಗಳು ಹೇಳ ಹೆಸರಿಲ್ಲದೆ ಹೋಗಿಬಿಟ್ಟಿವೆ. ಮಿಲ್ಲುಗಳೂ, ಫ್ಯಾಕ್ಟರಿಗಳೂ ನಡೆಸುತ್ತಿರುವ ಮಾಲೀಕರುಗಳು ಶಿಸ್ತು ಮುರಿದ ಕಾರಣ ಅಪಾರ ನಷ್ಟಗಳನ್ನನುಭವಿಸಿರುತ್ತಾರೆ.

ಹಿಂದಿದ್ದ ಪೂರ್ವಿಕರು ತಮ್ಮ ಸಂಸ್ಕೃತಿ ಕಾಪಾಡುವುದಕ್ಕಾಗಿಯೂ, ದೊಡ್ಡಸ್ತಿಕೆಗಾಗಿಯೂ ಹೆಣಗಿ ಶಿಸ್ತನ್ನು ಕಾಪಾಡಿದರು. ಅವರ ಮೇಲ್ಪಂಕ್ತಿಯನ್ನು ಈಗಿನ ವಿದ್ಯಾರ್ಜನೆ ಮಾಡುತ್ತಿರುವ ಯುವಕರು ಗಾಳಿಗೆ ತೂರಿರುವುದು ತುಂಬಾ ವ್ಯಸನಕರ.

**ಶಿಸ್ತಿನಿಂದ ತುಂಬಾ ಲಾಭವುಂಟು ಎಂಬುದನ್ನು ಮರೆಯಬಾರದು. ಮಹಾತ್ಮಾಗಾಂಧೀಜಿಯವರು ಇಂಗ್ಲೀಷರ ದಬ್ಬಾಳಿಕೆಯನ್ನು ಮುರಿದು ಭಾರತಕ್ಕೆ ಸ್ವಾತಂತ್ರ್ಯತೆಯನ್ನು ಗಳಿಸಿಕೊಟ್ಟರು. ಇವರು ಎಲ್ಲಾ ರಂಗಗಳಲ್ಲೂ ಅನುಸರಿಸಿದ ಶಿಸ್ತಿನಕ್ರಮ ನಮ್ಮೆಲ್ಲರಿಗೂ ಅನುಕರಣೀಯವಾಗಿದೆ.**

ಇನ್ನೊಂದು ಉದಾಹರಣೆ ಹೇಳಬೇಕೆಂದರೆ– ಅಳಿದ ಸರ್. ಎಂ. ವಿಶ್ವೇಶ್ವರಯ್ಯನವರ ಶಿಸ್ತು, ಅನುಸರಿಸಿದ ರೀತಿ, ನೀತಿಗಳು ಲೋಕಪ್ರಸಿದ್ಧವಾಗಿವೆ. ಅವರು ಎಲ್ಲಾ

ಕಾರ್ಯಚಟುವಟಿಕೆಗಳಲ್ಲೂ ಶಿಸ್ತನ್ನು ಸಾಧಿಸಿಯೇ ಲೋಕಪ್ರಸಿದ್ಧರಾದರು. ಬಾಹ್ಯಾಡಂಬರದ ಉಡುಪುಗಳಿಗೂ ಅವರು ಕೊಡುತ್ತಿದ್ದ ಶಿಸ್ತು ಎಲ್ಲರನ್ನೂ ಬೆರಗುಗೊಳಿಸಿತ್ತು. ಆದ್ದರಿಂದ ವಿದ್ಯಾರ್ಥಿಗಳು ಈ ಘನತೆವೆತ್ತರ ಉದಾಹರಣೆಯನ್ನು ಗಮನದಲ್ಲಿಟ್ಟು ಯಶಸ್ಸು ಪಡೆಯಲೆಂಬುದೇ ಈ ಲೇಖಕನ ಅಭಿಲಾಷೆ! ಏಕೆಂದರೆ "Discipline makes a man great" ಎಂಬ ನುಡಿಯುಂಟಷ್ಟೇ !

ಶಿಸ್ತನ್ನು ಪಾಲಿಸದೇ ಇದ್ದ ವಿದ್ವಾಂಸರು, ಇಂಜಿನೀಯರು, ಸರಕಾರೀ ಅಧಿಕಾರಿಗಳು ತಮ್ಮ ಬುಡಕ್ಕೆ ತಾವೇ ಕಲ್ಲು ಹಾಕಿಕೊಂಡಿರುತ್ತಾರೆ. ಶಿಸ್ತನ್ನು ಪಾಲಿಸದಿದ್ದ ದೊಡ್ಡದೊಡ್ಡ ಕೈಗಾರಿಕಾ ಧುರೀಣರೂ ಅಧಿಕ ನಷ್ಟಗಳನ್ನೂ ಅಪಮಾನವನ್ನೂ ಹೊಂದಿರುತ್ತಾರೆ.

ಶಿಸ್ತುಪಾಲನೆಗೆ ಗುರು-ಶಿಷ್ಯರಿಬ್ಬರೂ ಬಾಧ್ಯರಾಗಿರುತ್ತಾರೆ. ಗುರುಗಳು ಶಿಷ್ಯರಿಗೆ ತಾವು ಮೊದಲು ಶಿಸ್ತಿನ ಕ್ರಮವನ್ನು ಅನುಸರಿಸಿ ಮೇಲ್ಪಂಕ್ತಿ ಹಾಕಿದರೆ ಶಿಷ್ಯರೂ ಅವರ ಪಥದಲ್ಲಿ ನಡೆದಾರು. ಆದ್ದರಿಂದ ಗುರುಗಳು ಈ ಶಿಸ್ತಿನ ಕ್ರಮಕ್ಕೆ ಸೂತ್ರಧಾರಿಗಳಲ್ಲದೆ, ಮಾರ್ಗದರ್ಶಕರೂ ಆಗಿರುತ್ತಾರೆ.

ಶಿಸ್ತನ್ನು ಪಾಲಿಸದವರು ಅನಾಗರೀಕರಂತೆ ಪರಿಗಣಿಸಲ್ಪಡುವರು. ಅವರಿಗೆ ಮರ್ಯಾದೆಯನ್ನೆ ಜನರು ಕೊಡುವುದಿಲ್ಲ. ಇತ್ತೀಚಿನ ರಾಜಕಾರಣದಲ್ಲಿ ನಡೆದ ಅಶಿಸ್ತಿನಿಂದ ರಾಜ್‌ನಾರಾಯಣರೂ, ಚರಣಸಿಂಗರೂ ತಮ್ಮ ಮಂತ್ರಿಪದವಿಗಳಿಗೆ ನಿರ್ಬಂಧದಿಂದ ರಾಜೀನಾಮೆ ಕೊಟ್ಟಿದ್ದು ಯಾರೂ ಮರೆಯುವಂತಿಲ್ಲ. ಒಂದಿಲ್ಲೊಂದು ಕಾರಣದಿಂದ ಶಿಸ್ತುಪಾಲನೆ ರಾಜಕೀಯದಲ್ಲೂ, ಸಾಮಾಜಿಕದಲ್ಲೂ ಮುಖ್ಯಪಾತ್ರ ವಹಿಸುವುದು ಕಾಣಬರುತ್ತದೆ.

ಆದ್ದರಿಂದ ತಿಳುವಳಿಕೆ ತಂದುಕೊಂಡು, ವಿದ್ಯಾರ್ಥಿಗಳು ಈ ಶಿಸ್ತನ್ನು ಬೆಂಬಿಡದೆ ರಕ್ಷಿಸಿಕೊಂಡು ಉನ್ನತಿಹೊಂದುವ ಆಸೆ ಸದಾ ನೆನಪಿನಲ್ಲಿರಲಿ.

# ವ್ಯಕ್ತಿತ್ವ

ಜಿ. ಶಾರದರಾಜಶೇಖರ್, ಬೆಂಗಳೂರು.

ಮಾನವ ಇಂದು ಅತ್ಯಂತ ವೇಗದಿಂದ ಪ್ರಗತಿಯ ಪಥದತ್ತ ಧಾವಿಸುತ್ತಿದ್ದಾನೆ. ವಿಜ್ಞಾನದ ಪ್ರಗತಿ ಶರವೇಗದಿಂದ ಹರಿದು ಎಲ್ಲ ಕ್ಷೇತ್ರಗಳಲ್ಲೂ ಸಹ ತನ್ನ ಸ್ವಾಮ್ಯವನ್ನು ಪ್ರತಿಷ್ಠಾಪಿಸಿದೆ. ಮಾನವನಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಅವನು ಪಡೆಯುವಲ್ಲಿ ವಿಜ್ಞಾನದ ಮೂಲಕ ಸಿದ್ಧಿಯನ್ನು ಪಡೆದಿದ್ದಾನೆ, ಒಂದು ಕಡೆ ಮಾನವಜನಾಂಗ ಮುಂದುವರಿಯುತ್ತಿದ್ದರೆ ಅದರೊಡನೆಯೇ ಅವನ ವಿನಾಶಕ್ಕಾಗಿ ಹಾತೊರೆಯುವ ವಿಷಮ ಸನ್ನಿವೇಶಗಳೂ ಬೆಳೆಯುತ್ತಿವೆ.

ಜ್ಞಾನ ಬೆಳೆದು ರೂಪುಗೊಂಡಿದ್ದು ಮಾನವನ ನೆರವಿಗಾಗಿ. ಅದು ಅವನಿಗೆ ವಿನಾಶಕಾರಿಯಾಗಿ ಪರಿಣಮಿಸಬೇಕೆಂಬುದು ವಿಜ್ಞಾನದ ಉದ್ದೇಶವೇ ಅಲ್ಲ ಅದರೂ ವಿನಾಶದತ್ತ ವಿಜ್ಞಾನ ಬಳಕೆಯಾಗುತ್ತಿರುವುದಕ್ಕೆ ಮಾನವನ ಸಂಸ್ಕೃತಿ ನಾಗರೀಕತೆಗಳಲ್ಲಿ ಇರುವ ಲೋಪದೋಷಗಳೇ ಕಾರಣವೆಂದರೆ ತಪ್ಪಾಗಲಾರದು.

ಐಹಿಕವಾಗಿ ಅಗಾಧ ಪ್ರಗತಿ ಸಾಧಿಸಿರುವ ಮಾನವವರ್ಗ ಅಷ್ಟೇ ಪ್ರಮಾಣದಲ್ಲಿ ತನ್ನ ಅಂತರಿಕ ಸ್ವರೂಪದಲ್ಲಿ ಪ್ರಗತಿ ಸಾಧಿಸಿಲ್ಲ. ಅಂತರಿಕ ಸುಧಾರಣೆಯಲ್ಲಿ ವಿಫಲವಾಗಿ ಹಿಂದುಳಿದಿದ್ದಾನೆ

ಬಾಹ್ಯ ಪ್ರಗತಿಗೆ ಸರಿದೂಗುವಂತೆ ಅಂತರಿಕ ಪ್ರಗತಿಯೂ ಆಗಬೇಕು. ನಮ್ಮ ವ್ಯಕ್ತಿತ್ವದಲ್ಲಿ ಐಹಿಕ ಸಾಧನೆಯ ಮಟ್ಟಕ್ಕೆ ಸರಿದೂಗುವ ವೇಗದಲ್ಲಿ ಪ್ರಗತಿ ಸಿದ್ಧಿಸಬೇಕು ಆಗ ಮಾತ್ರ ನಮ್ಮ ಐಹಿಕ ಸಾಧನೆಯ ಫಲ ಮಾನವ ವರ್ಗದ ವಿನಾಶಕ್ಕೆ ಬದಲು ಅದರ ಕಲ್ಯಾಣ ಸಾಧನೆಗೆ ವಿನಿಯೋಗವಾಗುತ್ತದೆ.

ಜನರ ವ್ಯಕ್ತಿತ್ವದ ಸಾತ್ವಿಕ ಸ್ವರೂಪವೇ ಮಾನವಕುಲದ ಕಲ್ಯಾಣಕ್ಕೆ ದೊಡ್ಡ ರಕ್ಷೆ. ಹಿಂಸಾಪ್ರವೃತ್ತಿಗೆ ತಡೆಯೊಡ್ಡಲು ಇದೊಂದೇ ದಿವ್ಯಾಸ್ತ್ರ. ಇದು ವಯಸ್ಕರಲ್ಲಿ ಇದ್ದಕ್ಕಿದ್ದ ಹಾಗೆ ಆವಿರ್ಭವಿಸುವುದು ಅಸಂಭವ. ಅದು ಬಾಲ್ಯದಿಂದಲೂ ಮಕ್ಕಳಲ್ಲಿ ಬೆಳೆದು ಜೀವನದ ಪರಿಪಾಕದಂತೆ ಸಿದ್ಧಿಸಿ ಬರಬೇಕು. ಅಂದರೆ ನಮ್ಮ ಮಕ್ಕಳು ಐಹಿಕ ಸಾಧನೆಗೆ ಅಗತ್ಯವಾದ ಶಿಕ್ಷಣ ಪಡೆದರೆ ಸಾಲದು. ಅವರು ಅಂತರಂಗದ ಪಾರಿಶುದ್ಧತೆಗೆ ನೆರವಾಗತಕ್ಕ ಶಿಕ್ಷಣವನ್ನೂ ಪಡೆಯಬೇಕು. ಮಾನವೀಯ ಗುಣಧರ್ಮಗಳನ್ನು ಬೆಳೆಸಬೇಕು. ಅಂದು ಮಾತ್ರ ಮಾನವವರ್ಗ ಐಹಿಕವಾಗಿ ಪ್ರಗತಿ ಸಾಧಿಸುವಂತೆ ಆತ್ಮೀಯವಾಗಿಯೂ ಪ್ರಗತಿ ಸಾಧಿಸೀತು. ಅದರಿಂದ ವಿಜ್ಞಾನದ ದೈತ್ಯಶಕ್ತಿಯನ್ನು ಮಾನವನ ನಾಶಕ್ಕೆ ಬಳಸುವುದು ತಪ್ಪಿ ಅವನ ಕಲ್ಯಾಣಕ್ಕೆ ಮಾತ್ರ

ವಿನಿಯೋಗಿಸುವುದು ಸಾಧ್ಯವಾದೀತು. ಪ್ರಾಚೀನ ಭಾರತದ ತತ್ವಚಿಂತಕರನೇಕರು ವ್ಯಕ್ತಿಗಳಲ್ಲಿ ಪ್ರಧಾನವಾಗಿ ಕಾಣುವ ಗುಣಗಳನ್ನನುಸರಿಸಿ ಸಾತ್ವಿಕ, ರಾಜಸಿಕ, ಮತ್ತು ತಾಮಸಿಕ ಎಂಬ ಮೂರು ರೀತಿಯ ವ್ಯಕ್ತಿತ್ವವನ್ನು ಗುರುತಿಸುತ್ತಿದ್ದರು.

ಸಮಾಜದಲ್ಲಿ ವಿವಿಧ ರೀತಿಯ ವ್ಯಕ್ತಿಗಳಿರುತ್ತಾರೆ. ಅದು ಅನಿವಾರ್ಯ, ಏಕೆಂದರೆ ಯಾವ ವ್ಯಕ್ತಿತ್ವ ನಿರೂಪಣೆಗೇ ಆಗಲಿ ಮೂಲವಸ್ತುಗಳು ಅನುವಂಶೀಯ ವಾಗಿ ಬಂದಿರುತ್ತವೆ. ಅವನ್ನೇ ಆಧಾರ ಮಾಡಿಕೊಂಡು ವ್ಯಕ್ತಿತ್ವವನ್ನು ಬೆಳೆಸಬೇಕು. ವ್ಯಕ್ತಿತ್ವದಲ್ಲಿ ಕಾಣುವ ಅಭಿನ್ನತೆಗಳು ಜನ್ಮತಃ ಬಂದವು ಅವನ್ನು ಶಿಕ್ಷಕರಾಗಲಿ ಇತರ ರಾಗಲಿ ಮಾರ್ಪಡಿಸುವಂತಿಲ್ಲ. ವ್ಯಕ್ತಿತ್ವದ ಈ ಅನುವಂಶೀಯ ಸ್ವರೂಪವನ್ನು ಅನು ಸರಿಸಿಯೇ ಅದನ್ನು ಬೆಳೆಸಬೇಕಾಗುತ್ತದೆ. ಮನಃ ಪ್ರವೃತ್ತಿಗಳು ವಂಶಗತವಾಗಿ ಬಂದಿರುವ ಭಿನ್ನತೆಗಳಲ್ಲಿ ಪ್ರಧಾನವಾದವು, ಹಾಗೂ ಬಬ್ಬೊಬ್ಬ ವ್ಯಕ್ತಿಗು ವಂಶಗತ ವಾಗಿ ಬಂದಿರುವ ಆ ಅಂಶಗಳನ್ನು ಮನಸ್ಸಿನಲ್ಲಿಟ್ಟು ಕೊಂಡು ಆದಷ್ಟು ಆದರಣೀಯ ವ್ಯಕ್ತಿತ್ವ ರೂಪುಗೊಳ್ಳುವಂತೆ ಅವನ್ನು ವ್ಯವಸ್ಥೆಗೊಳಿಸಿ ಬೆಳೆಸುವುದು ಶಾಲೆಯ ಕಾರ್ಯ ವಾಗುತ್ತದೆ ಸಮಾಜ ಜೀವನದಲ್ಲಿ ತೀವ್ರಗತಿಯಲ್ಲಿ ಕಾಣಿಸಿಕೊಳ್ಳುತ್ತಿರುವ ಬದ ಲಾವಣೆಗೆ ಹೊಂದಿಕೊಂಡು ಹೋಗುವ ಶಕ್ತಿ ವ್ಯಕ್ತಿಯ ಉಳಿವಿಗೆ ಬಹು ಅಗತ್ಯ. ಅನುವಂಶೀಯವಾಗಿ ಯಾವ ಕುಂದು ಕೊರತೆಗಳೇ ಬಂದಿರಲಿ ಶಿಕ್ಷಣದಿಂದ ಅವು ಸರಿದೂಗಬೇಕು.

ಸೂಕ್ತ ವ್ಯಕ್ತಿತ್ವದ ನಿರೂಪಣೆಯಿಂದ ವೈಯುಕ್ತಿಕ ಜೀವನದ ಕಷ್ಟಗಳು ಕಳೆ ಯುವುದರ ಜತೆಗೆ ಸಮಾಜದ ಸುಖ ಶಾಂತಿಗೂ ಸಮೃದ್ಧಿಗೂ ಅವಕಾಶವಾಗುವುದು.

ನಾಯಕನಾಗಲಿ, ಹಿಂಬಾಲಕರಾಗಲಿ, ವಿಹಿತವಲ್ಲದ ವ್ಯಕ್ತಿತ್ವ ಪಡೆದಿರುವು ದಾದರೆ ಮಾನವ ಸಮಾಜಕ್ಕೆ ಯಾವ ಗಳಿಗೆಯಲ್ಲಾದರೂ ವಿಪತ್ತು ಒದಗಬಹುದು.

ವಿಚಾರ ಶೀಲ ಹಿಂಬಾಲಕರ ವ್ಯಕ್ತಿತ್ವ ನಾಯಕನೊಬ್ಬನು ಅನುಸರಿಸುವ ವಕ್ರ ಮಾರ್ಗವನ್ನು ತಪ್ಪಿಸಬಹುದು. ವ್ಯಕ್ತಿತ್ವ ತಮಗೂ ಸಮಾಜಕ್ಕೂ ವಿಹಿತವಾಗಿರ ಬೇಕು.

ಮಾನವನು ಸಂಘ ಜೀವನವನ್ನೇ ಮಾಡಬೇಕು. ವಿಧಿಯಿಲ್ಲ, ಹಾಗೇಯೇ ಸಮಾಜದಲ್ಲಿ ತನ್ನ ಶ್ರೇಯಸ್ಸನ್ನು ಬಯಸಿ ಇತರರ ಶ್ರೇಯಸ್ಸನ್ನು ಬಯಸದಿದಲ್ಲಿ ಸಂಘ ಜೀವನದಲ್ಲಿ ತನ್ನ ಶ್ರೇಯಸ್ಸು ಪುರೋಭಿವೃದ್ಧಿಗೆ ಘಾತಕವಾಗಬಹುದು ಸಮಾಜದ ಮನ್ನಣೆಗೋಸ್ಕರವಾದರೂ ಸಾರ್ವತ್ರಿಕ ಹಿತವನ್ನು ವ್ಯಕ್ತಿಯು ಕೋರ ಬೇಕಾಗುತ್ತದೆ.

ಪ್ರತಿಯೊಬ್ಬನ ವ್ಯಕ್ತಿತ್ವದಲ್ಲಿಯೂ ಆತ್ಮದ ಎರಡು ಸ್ವರೂಪಗಳಿವೆ. ಬಾಹ್ಯ ಸ್ವರೂಪ ಮತ್ತು ಆಂತರಿಕ ಸ್ವರೂಪ. ಬಾಹ್ಯಸ್ವರೂಪವು ಸ್ವಲ್ಪ ಕೆಳ ಮಟ್ಟದ್ದು

ಏಕೆಂದರೆ ಅದು ವ್ಯಕ್ತಿಯ ಸಂವೇದನಾ ಶಕ್ತಿಯನ್ನೊಳಗೊಂಡದ್ದು, ಪಶು ಸ್ವಭಾವದ ಪ್ರೇರಣೆ, ಪ್ರವೃತ್ತಿಗಳನ್ನು ಹೊಂದಿರುತ್ತದೆ. ದೈಹಿಕಸುಖ,ಇಂದ್ರಿಯಗಳ ಅನುಭೋಗ ಇವುಗಳ ಕಡೆ ಒಲುತ್ತದೆ. ಆಂತರಿಕ ಸ್ವರೂಪವಾದ ಅಂತರಾತ್ಮನ ಸ್ವರೂಪ ಯಾವಾಗಲೂ ವಿವೇಚನಾಪೂರಿತವಾದದ್ದು. ಸಂಯಮದ ಅಭ್ಯಾಸವುಳ್ಳದ್ದು ವ್ಯಕ್ತಿಯಲ್ಲಿನ ಮೂಲ ಪ್ರೇರಣೆ. ಸಹಜ ಪ್ರವೃತ್ತಿಗಳನ್ನು ಭಾವೋದ್ರೇಕಗಳನ್ನು ರಸಭಾವ, ಮನೋವಿಕಾರಗಳನ್ನು ವಿವೇಚನಾ ಬಲದಿಂದ ನಿಯಂತ್ರಿಸುತ್ತದೆ, ಕಟ್ಟಿಹಿಡಿಯುತ್ತವೆ.

ನೀತಿ ಪ್ರಗತಿ ಸಾಧನೆಯಾದ ಹಾಗೆಲ್ಲ ಕ್ರಮವಾಗಿ ವ್ಯಕ್ತಿತ್ವಕ್ಕೆ ಮಾನ್ಯತೆ ಸಲ್ಲತೊಡಗಿತು. ಪ್ರಗತಿಮಾರ್ಗದಲ್ಲಿ ಕ್ರಮೇಣ ಮುಂದುವರಿದಹಾಗೆಲ್ಲ, ಸಮಾಜದಲ್ಲಿನ ಪ್ರತಿಯೊಬ್ಬ ವ್ಯಕ್ತಿಯು ವ್ಯಕ್ತಿತ್ವಕ್ಕೆ ಮಾನ್ಯತೆ ದೊರೆತು ವ್ಯಕ್ತಿಗೌರವ, ಕರ್ತೃಮಹತ್ವ ಇವುಗಳು ಗಮನಕ್ಕೆ ಸಂದವು.

ಈಗಿನ ಮಾನವೀಯ ಹಕ್ಕುಗಳು ಮತ್ತು ಮೂಲಭೂತಹಕ್ಕುಗಳು ಎಂಬುವು ಈ ವ್ಯಕ್ತಿ ಮಾನ್ಯತೆಯ ಪ್ರತೀಕವೇ ಸರಿ. ಅಂದರೆ ಸಮಾಜಕ್ಕೋಸ್ಕರ ವ್ಯಕ್ತಿ ಎಂಬ ಅಭಿಪ್ರಾಯ ಬದಲಾಗಿ, ವ್ಯಕ್ತಿತ್ವಕ್ಕೆ ಪ್ರಾಧಾನ್ಯತೆ ಪ್ರಾಶಸ್ತ್ಯ ದೊರಕಿತು. ಮಾನವನು ಪರಮೋನ್ನತ ಧ್ಯೇಯದೆಡೆಗೆ ಸಾಗುತ್ತಿದ್ದಾನೆ. ಆ ಪ್ರಗತಿ ಸಾಧನೆಗೆ ಪ್ರಪ್ರಥಮವಾಗಿ ಉನ್ನತ ಧ್ಯೇಯಗಳು ಆದರ್ಶಗಳು ಬೇಕು. ಪ್ರಸಕ್ತ ಅಭಾಸಗಳ ಬಗ್ಗೆ ಅಂತರ್ಯದಲ್ಲಿ ಅಸಹ್ಯ ಹುಟ್ಟಬೇಕು. ಆ ಅಭಾಸಗಳನ್ನು ನಿವಾರಿಸಲು ಸ್ಥಿರಸಂಕಲ್ಪ ಪ್ರಯತ್ನವೂ ಬೇಕು. ಎಷ್ಟೇ ಅಡ್ಡಿ ಆತಂಕಗಳು ಒದಗಿದರೂ ಅವುಗಳನ್ನು ಎದುರಿಸಲು ಧೈರ್ಯಬೇಕು ಇದರ ಬಗ್ಗೆ ಜನತೆಯಲ್ಲಿ ತಿಳುವಳಿಕೆಯುಂಟಾಗಬೇಕು. ಜ್ಞಾನವೇ ಅಲ್ಲದೆ ಶ್ರದ್ಧೆಯೂ ಬೇಕು. ಹಾಗಿದ್ದರೆ ಮಾತ್ರವೇ ಪ್ರಗತಿ ಸಾಧ್ಯ.

# ಶರಣರು ಮೆಟ್ಟಿದ ಧರೆ

## ಎಡೆಯೂರು-೧



**ಪಂ. ಕೆ. ಪಿ. ಶಿವಲಿಂಗಯ್ಯ**
ಎಂ.ಎ, ಬಿ.ಎಡ್.
ಪ್ರಿನ್ಸಿಪಾಲರು, ಸರ್ಕಾರಿ ಜೂ. ಕಾಲೇಜ್,
ಮಲ್ಲೇಶ್ವರಂ, ಬೆಂಗಳೂರು –3.

ಕರ್ನಾಟಕ ರಾಜ್ಯದ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಒಂದು ಗ್ರಾಮವಿದು. ಇದನ್ನು "ಯಡಿಯೂರು" ಎಂದೂ ಕರೆಯುವ ವಾಡಿಕೆಯುಂಟು. ಬೆಂಗಳೂರಿನಿಂದ 90 ಕಿ.ಮೀ. [ಸು, 60 ಮೈಲಿ] ದೂರದಲ್ಲಿ ಬೆಂಗಳೂರು–ಹಾಸನ ಮಾರ್ಗದಲ್ಲಿದೆ. ಇದರ ಪ್ರಸಿದ್ಧಿಯೆಂದರೆ - ಪರಮ ವೈರಾಗ್ಯಮೂರ್ತಿಯೂ, ವೀರಶೈವ ಧರ್ಮೋದ್ಧಾರಕರಲ್ಲಿ ಪ್ರಮುಖರೂ ಆದ "ತೋಂಟದ ಸಿದ್ಧಲಿಂಗೇಶ್ವರ" ಸಜೀವ ಸಮಾಧಿಯಿರುವುದು.

ಕನ್ನಡ ಸಾಹಿತ್ಯಪ್ರಪಂಚದಲ್ಲಿ 12ನೆಯಶತಮಾನ ಒಂದುರೀತಿಯ ಉತ್ಕ್ರಾಂತಿಯ ಕಾಲವೆನಿಸಿದರೆ, 15ನೆಯ ಶತಮಾನವು (ಮತ್ತೊಂದು ತೆರನಾದ) ಪುನರುತ್ಕ್ರಾಂತಿಯ ಕಾಲವೆನಿಸಿದೆ. ಅದಕ್ಕೆ ಬಹುಮುಖ್ಯ ಕಾರಣರು ಶ್ರೀ ಸಿದ್ಧಲಿಂಗೇಶ್ವರ ಯತಿಗಳು.

ಚಾಮರಾಜನಗರ ತಾಲ್ಲೂಕಿನ 'ಹರದನಹಳ್ಳಿ'ಯಲ್ಲಿ ಜ್ಞಾನಾಂಬೆ - ಮಲ್ಲಿಕಾರ್ಜುನ ದಂಪತಿಗಳಿಗೆ ಅವರ ಪೂಜಾಫಲದ ದ್ಯೋತಕವೆಂದರೆ ಒಂದು ದಿವ್ಯ ಶಿಶು ಕಾಣಿಸಿಕೊಂಡಿತು. ಆ ಮಗುವೇ ಶೂನ್ಯಪೀಠದ 18ನೆಯ ಪಟ್ಟಾಧಿಕಾರಿಗಳಾಗಿದ್ದ

ಗೋಸಲ ಚನ್ನಬಸವೇಶ್ವರರ ಕೃಪೆಗೆ ಪಾತ್ರವಾಗಿ, ಆ ಮಹಾಸ್ವಾಮಿಗಳ ಉತ್ತರಾಧಿಕಾರಿಯೂ ಆಗಿ ಶೂನ್ಯ ಸಿಂಹಾಸನವನ್ನೇರಿದ್ದು ಭುವನದ ಭಾಗ್ಯವೇ ಸರಿ. ಜಗದ್ಗುರುವಾದರೂ; ಜಗತ್ತನ್ನು ಸಂಚರಿಸಿ ಲೋಕೋದ್ಧಾರ ಮಾಡತೊಡಗಿದರು. ಗುರುವಿನಪ್ಪಣೆ ಪಡೆದು 770 ಜನ(ಚರ) ಜಂಗಮರೊಂದಿಗೆ ಭಾರತದೇಶದ ಉದ್ದಗಲಕ್ಕೂ ಸಂಚಾರಮಾಡಿ "ಲಿಂಗತತ್ವ"ವನ್ನು ಪ್ರಚಾರಮಾಡಿದರು. ಅಂತಹ ಸಂಚಾರ ಕಾಲದಲ್ಲಿಯೇ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೂ ಈ ಯತಿಪುಂಗವರು ದಯಮಾಡಿಸಿದ್ದುದು ಹಾಗೂ ಇಲ್ಲಿ ಕೆಲವು ಕಾಲವಿದ್ದು ಅನುಷ್ಠಾನ ಮಾಡಿ ಇದೊಂದು ಅವಿಮುಕ್ತ ಕ್ಷೇತ್ರವೆಂದೆನ್ನಿಸಿದರು. ಇಂದಿಗೂ ಶ್ರೀ ಸ್ವಾಮಿಯೇ ಕ್ಷೇತ್ರಾಧಿಪತಿಯೆನಿಸಿ ಸಕಲ ಕಾರ್ಯಗಳ ಸುಸೂತ್ರತೆಗೂ ಕಾರಣರಾಗಿರುತ್ತಾರೆ.

ಶ್ರೀ ಸಿದ್ಧಲಿಂಗೇಶ್ವರರು ಸಿದ್ಧಗಂಗೆಯಿಂದ ಹೊರಟು ತುಮಕೂರು, ಗೂಳೂರು, ಹೊನ್ನುಡಿಕೆ, ನಾಗವಲ್ಲಿ, ಹೆಬ್ಬೂರು.ರಾಮೇನಹಳ್ಳಿ, ಹುಲಿಯೂರ.ದುರ್ಗ ಮಾರ್ಗವಾಗಿ ಪ್ರಯಾಣಮಾಡುತ್ತಾ ಆಯಾ ಸ್ಥಳಗಳ ಭಕ್ತರನ್ನುದ್ಧರಿಸುತ್ತಾ ಕಗ್ಗೆರೆಯ ತೋಟದಲ್ಲಿ ತಪಸ್ಸಿಗೆ ಕುಳಿತರು. ಆಊರಿನ ಭಕ್ತ ನಂಬಿಯಣ್ಣಶೆಟ್ಟಿ ಬಿನ್ನಹಮಾಡಿ ಆಕಸ್ಮಿಕ ಘಟನೆಯಿಂದ ಮರೆತಿರಲು, ಇತ್ತ ಸ್ವಾಮಿಯ ಮೇಲೆ ಹುತ್ತ ಬೆಳೆದು ಕಡೆಗೆ ಒಂದು ಗೋವು ಆ ಹುತ್ತದ ಮೇಲೆ (ತನ್ನಷ್ಟಕ್ಕೆ ತಾನು) ಹೋಗಿ ಹಾಲು ಕರೆಯುತ್ತಿದ್ದಾಗ ನಿಜಸಂಗತಿ ಗೊತ್ತಾಯಿತು. ಅಂದಿನಿಂದ ತೋಂಟದಾರ್ಯ - ತೋಂಟದ ಸ್ವಾಮಿ– ತೋಂಟದ ಸಿದ್ಧಲಿಂಗೇಶ್ವರರೆಂದು ಹೆಸರಾಯಿತು.

ಕಗ್ಗೆರೆಯಿಂದ ಎಡೆಯೂರಿಗೆ ದಯಮಾಡಿಸಿ ಅಲ್ಲಿ ಅನುಷ್ಠಾನ ಮಾಡತೊಡಗಿದರು. ಸಮೀಪದ ಗ್ರಾಮವಾದ ಕೊಡಿಗೇನಹಳ್ಳಿ (ಈಗಿನ ಕೊಡವತ್ತಿ) ಯಲ್ಲಿದ್ದ ಚನ್ನರಾಯಒಡೆಯರು ಗವಿಮಠದಲ್ಲಿದ್ದುಕೊಂಡು ಕದಂಬ ನದೀತೀರದಲ್ಲಿ 'ಚಿತ್ರಮಠ' ಕಟ್ಟಿಸಿದರು. ವಿಜಯನಗರದಲ್ಲಿ ವಿರೂಪಾಕ್ಷರಾಜನಾಳುತ್ತಿದ್ದ ಕಾಲವದು. (ಕ್ರಿ. ಶ. 1467-78) ಅವರೇ ಸರ್ಕಾರದಿಂದ 10 ಎಕರೆ (ಗ್ರಾಮಠಾಣೆ) ಜಮೀನನ್ನು ಪಡೆದುಕೊಂಡು ರೇಣುಕಶಾಖಾ ಮಠವನ್ನು ಕಟ್ಟಿಸಿದರು. ಶ್ರೀ ರುದ್ರೇಶ್ವರ (ವೀರಭದ್ರ) ದೇವರನ್ನು ಪ್ರತಿಷ್ಠೆಮಾಡಿಸಿದರು. ಈಗಿರುವ ಆಂಜನೇಯ ದೇವಾಲಯ ಮಾತ್ರ ಅಲ್ಲಿಯೇ ಇದ್ದಿತೆಂದು ಈಗ 95 ವರ್ಷ ವಯಸ್ಸಾಗಿರುವ ಶ್ರೀ ನಂಜಪ್ಪಯ್ಯನವರು [ಈ ಲೇಖಕನು ಶ್ರೀ ಸ್ವಾಮಿಯವರ ಸನ್ನಿಧಿಯಲ್ಲಿ 1984ರ ಕಾರ್ತಿಕ ಮಾಸದಲ್ಲಿ ಪ್ರವಚನ ಮಾಡುತ್ತಿದ್ದಾಗ] ತಿಳಿಸಿದರು. - ಅವರ ಮಗ ಲಿಂಗಪ್ಪಒಡೆಯರು ಅವರ ಮಗ ಚನ್ನವೀರಪ್ಪಒಡೆಯರು- ಸತಿ ಪಾರ್ವತಮ್ಮ. ಈ ದಂಪತಿಗಳಿಗೆ ಚಿಟ್ಟಿಗದೇವರು ಮತ್ತು ಚನ್ನಮಲ್ಲಿಕಾರ್ಜುನ ದೇವರು ಎಂಬಿಬ್ಬರು ಮಕ್ಕಳು. ಇವರ ಪೈಕಿ ಚಿಟ್ಟಿಗದೇವರೇ ತಮ್ಮ ಪೂರ್ವಾಶ್ರಮದ ಮಾತಾ-ಪಿತೃಗಳ ಕೋರಿಕೆಯಂತೆ ತೋಂಟದಾರ್ಯರಿಗೆ ಮಠವನ್ನು ಕಟ್ಟಿಸಿಕೊಟ್ಟರೆಂದು ಪ್ರತೀತಿ. ಸುಮಾರು ಕ್ರಿ. ಶ. 1500 ರಲ್ಲಿ ಅಂದರೆ ಸ್ವಾಮಿಯವರು ಸಮಾಧಿ ಪ್ರವೇಶಮಾಡಿದ ಕೆಲವು ವರ್ಷಗಳ ಅವಧಿ

ಯಲ್ಲೇ ರಚಿತವಾಯಿತೆನ್ನಲಾದ ಒಂದು ಶಿಲಾಶಾಸನವಿಂತಿದೆ :

"ಇಂತಪ್ಪ ಅನಾದಿಜಂಗಮವೇ ಜಗದ್ಧಿತಾರ್ಥವಾಗಿ ಚರಿಸಿದ ಕ್ರಮವೆಂತೆಂದಡೆ ಜ್ಞಾನಕ್ರಿಯಾಸ್ವರೂಪನುಂ. ಸರ್ವಾಂಗಲಿಂಗಿ, ಷಟ್ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ, ಪಾದೋದಕಪ್ರಸಾದಪ್ರತಿಷ್ಠಾಚಾರ್ಯನುಂ, ಅಷ್ಟಾವರಣಾಲಂಕರಣ ದ್ವೈತಾದ್ವೈತ ತಿಮಿರಮಾರ್ತಾಂಡನುಂ, ಇಂತಪ್ಪ ದಿವ್ಯ ಶಿವಯೋಗಿ ಸಿದ್ಧಲಿಂಗೇಶ್ವರಂಗೆ ಸಮ್ಯಗ್ ಜ್ಞಾನೋದಯವಾಗಿ ಸಂಸಾರಹೇಯಮುಮಂ, ಮಾಡೆ ಶರಣು ಹೊಕ್ಕ ಶಿಷ್ಯ ಜನಗಳ ನಾಮಸಂಕ್ರಮಂಗಳೆಂತೆಂದಡೆ—ಸಪ್ಪೆದೇವರು, ಉಪ್ಪಿನಹಳ್ಳಿಯ ಸ್ವಾಮಿ ಸಿದ್ಧದೇವರು, ನಂಜೆದೇವರು ಬೋಳಬಸವರಾಜದೇವರು, ಗುಮ್ಮಳಾಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣ್ಣಸಿದ್ಧದೇವರು, ಶೀಲವಂತದೇವರು, ಚಿಟ್ಟಿಗದೇವರು ಇಂತೆ ಇವರು ಮುಖ್ಯವಾದ ಭಕ್ತಮಹೇಶ್ವರರ್ಗೆ ಷಟ್ಸ್ಥಲಜ್ಞಾನ ಲಿಂಗಾಂಗ ಸಂಬಂಧ ಸಮರಸೈಕಾರ್ಥಮಂ ಬೋಧಿಸಿ ಮುಕ್ತರಂಮಾಡಿ ಷಟ್ಸ್ಥಲೈಕಾರ್ಥವಾಗಿ ಮಾಡುವಕ್ರಿಯೆಗಳೆಲ್ಲ ಎಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿವಯೋಗಸಮಾಧಿ ಸನ್ನದ್ಧರಾದರು. ತೋಂಟದಸ್ವಾಮಿಯ ಪದಾರಾಧಕರಾದ ದಾನಿವಾಸನಿವಾಸಿಗಳಾದ ಚೆನ್ನರಾಯಒಡೆಯರ ಮಕ್ಕಳು ಲಿಂಗಪ್ಪಒಡೆಯರು ಲಿಂಗಪ್ಪಒಡೆಯರ ಮಕ್ಕಳು ಪಾದೋದಕ ಪ್ರಸಾದ ಸಂಪನ್ನರಾದ ಚೆನ್ನವೀರಪ್ಪ ಒಡೆಯರು ಚೆನ್ನವೀರಪ್ಪಒಡೆಯರ ಸತಿಪಾರ್ವತಮ್ಮ ದಂಪತಿಗಳು ತಮ್ಮ ಭಕ್ತಿಯಿಂದ ತೋಂಟದ ಸ್ವಾಮಿಗೆ ಕಲ್ಲುಮಠವ ಕಟ್ಟಬೇಕೆಂದು ಚಿಟ್ಟಿಗದೇವರಿಗೆ ಪದಾರ್ಥಮಂ ಕೊಟ್ಟು ನಮಸ್ಕಾರಮಂ ಮಾಡಲಾಗಿ ಭಕ್ತಿಪದಾರ್ಥಮಂ ಕೈಕೊಂಡು ಎಡೆಯೂರಿಗೆ ಬಿಜಯಂಗೈದು ತೋಂಟದ ಸ್ವಾಮಿಗೆ ಕಲ್ಲುಮಠವನ್ನು ಎಂಟುಜಡೆಯ ಬಗೆಯ ಹಿರಿಯರು ಚಿಟ್ಟಗ ದೇವರು ಕಟ್ಟಿಸಿದರು".

ಶ್ರೀ ಸಿದ್ಧಲಿಂಗೇಶ್ವರರು ಕ್ರಿ. ಶ. 1470 ರಲ್ಲಿ ತಮ್ಮ 82ನೆಯ ವಯಸ್ಸಿನಲ್ಲಿ, ತಮ್ಮ ಶಿಷ್ಯರಲ್ಲಿ ಅಗ್ರಗಣ್ಯರಾದ ಶ್ರೀ ಬೋಳ ಬಸವೇಶ್ವರರಿಗೆ ಷಟ್‌ಸ್ಥಲ ಜ್ಞಾನಸಾರವನ್ನು ಬೋಧಿಸಿ ಅವರನ್ನೇ ತಮ್ಮ ಉತ್ತರಾಧಿಕಾರಿಗಳನ್ನಾಗಿ (20ನೆಯ ಶೂನ್ಯಪೀಠಾಧೀಶರನ್ನಾಗಿ) ನಿಯಮಿಸಿ ಸಜೀವ ಸಮಾಧಿಯನ್ನೈದಿದರೆಂದು ಸ್ಥಳೀಯ ಪುರಾವೆಗಳಿಂದ ತಿಳಿದು ಬರುತ್ತದೆ.

ಈ ಮಹಾನುಭಾವರ ವಿಷಯವಾಗಿ ಬ್ರಾಹ್ಮಣ(ಸಮಕಾಲೀನ) ಕವಿಯಾದ ಹೆಬ್ಬಾರು ಹೇರಂಬ (ಸು. 1500) ಕವಿಯ ಸಾಂಗತ್ಯ, ವಿರಕ್ತ ತೋಂಟದಾರ್ಯನ (ಸು. 1560) ಸಿದ್ಧೇಶ್ವರ ಪುರಾಣ, ಶಾಂತೇಶನ(1561) ತೋಂಟದ ಸಿದ್ಧೇಶ್ವರ ಪುರಾಣ [ವಿರೂಪಾಕ್ಷಪಂಡಿತನ (ಸು. 1581) ಚೆನ್ನಬಸವ ಪುರಾಣ] ಗಳಲ್ಲಿ ರಚಿತವಾಗಿವೆ. ಚೆನ್ನಬಸವಪುರಾಣದಲ್ಲಿ ಸ್ವಲ್ಪ ಮಟ್ಟಿನ ಪ್ರಸ್ತಾಪವಿದೆ.

ಅಂತೂ ಎಡೆಯೂರು ಒಂದು ಅವಿಮುಕ್ತ ಕ್ಷೇತ್ರ ಹಾಗೂ ಯಾತ್ರಾಸ್ಥಳವಾಗಿ ಇಂದಿಗೂ ಮೆರೆದಿದೆ.

# ಗಾಂಧೀಜಿ ಮತ್ತು ಪ್ರಜಾಪ್ರಭುತ್ವ

ಪ್ರೊ. ವಸಂತಕುಷ್ಟಗಿ ಪ್ರಾಂಶುಪಾಲರು
ಎಂ.ಎಸ್.ಆರ್ಟ್ಸ್. ಡಿಗ್ರಿ ಕಾಲೇಜು ಕಲಬುರ್ಗಿ ೫೮೫೧೦೨

ಭಾರತೀಯ ಸಂಸ್ಕೃತಿಯ ಪರಿಸರದಲ್ಲಿ ಪ್ರತಿದಿವಸವು ಪುಣ್ಯದಿನ. ಪ್ರತಿ ನಿಮಿಷವು ಪರ್ವಕಾಲ. ಈ ಅನುಭವವನ್ನು ಪ್ರತಿಯೊಬ್ಬ ಮಾನವನು ಪಡೆಯ ಬೇಕಾದರೆ ಈ ನಾಡಿನಲ್ಲಿ ಬಾಳಿಹೋದ ಪೂಜ್ಯರ ಬದುಕಿನ ಮಾರ್ಗದ ಹೆಜ್ಜೆಗಳನ್ನು ಅವರು ನುಡಿದ ಮಾತುಗಳನ್ನು ನೆನಪಿಸಿಕೊಂಡು ನಮ್ಮ ಬಾಳನ್ನು ವಿಮರ್ಶಿಸಿಕೊಂಡು ಹುದುಬಾಳಿನತ್ತ ನಮ್ಮನ್ನೇ ನಾವು ಸಮರ್ಪಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಕನಿಷ್ಟ ಒಂದೊಂದು ಹೆಜ್ಜೆಯನ್ನಾದರೂ ಮುಂದೆ ಇಡಬೇಕಾದುದು ಕರ್ತವ್ಯ. ಹೀಗೆ ವರ್ಷ ದಲ್ಲಿಯ ಪ್ರತಿದಿವಸ, ಪ್ರತಿಕ್ಷಣ ಒಂದೊಂದು ಹೆಜ್ಜೆಯನ್ನು ಒಳಿತಿನತ್ತ ಇಡುತ್ತ ಹೋದರೆ ನಾವೆಲ್ಲ ಭಾರತೀಯರು ದೇವಮಾನವರೇ ಆಗುತ್ತೇವೆ. ಆಗ ಭರತಭೂ ಮಿಯು ಶಾಶ್ವತವಾಗಿ ಸ್ವರ್ಗದ ತುಣುಕೇಕೆ ಸಂಪೂರ್ಣ ಸ್ವರ್ಗವೇ ಆಗಿಬಿಡುತ್ತದೆ. ಇಂತಹ ಶಾಶ್ವತ ಸ್ವರ್ಗದ ನಿರ್ಮಾಣಕ್ಕೆ ಹೆಣಗಾಡಿದವರಲ್ಲಿ ಮೋಹನದಾಸ ಕರಮು ಚಂದ ಗಾಂಧೀಜಿಯವರ ಹೆಸರೇ ಅಗ್ರಗಣ್ಯ.

ಈ ಮೋಹನದಾಸ ಕರಮುಚಂದ ಗಾಂಧೀಯವರು ತಮ್ಮ ಬದುಕಿನಲ್ಲಿ ಕಂಡುಂಡ ಸತ್ಯದ ಬಲದಿಂದ, ತಮ್ಮನ್ನೇ ತಾವು ದೇಶಕ್ಕೆ ಸಮರ್ಪಿಸಿಕೊಂಡು ಸ್ವಾತಂತ್ರ್ಯ ಪ್ರಾಪ್ತಿಯ ಹಕ್ಕನ್ನು ಸಾಧಿಸಿ ತೋರಿಸಿದರು. ಅವರ ಈ ಸಿದ್ಧಿಗೆ ಕಾರಣ, ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ವಾದ, ಅಸ್ತೇಯ, ಅಪರಿಗ್ರಹ ಅಭಯ ಅಸ್ಪರ್ಶತಾ ನಿವಾರಣೆ, ಶಾರೀರಶ್ರಮ, ಸರ್ವಧರ್ಮ ಸಮನ್ವಯಭಾವನೆ, ಸ್ವದೇಶಿ-ಇತ್ಯಾದಿ ಅವರು ಆಚರಿಸಿದ ಕಠೋರ ವ್ರತಗಳು. ಈ ಮಾರ್ಗದಲ್ಲಿ ಅವರು ನಡೆದು ಆಸೇತು ಹಿಮಾಚಲ ಭಾರತೀಯರನ್ನೆಲ್ಲ ಆಕರ್ಷಿಸಿ, ಸಂಘಟಿಸಿ, ಆಂಗ್ಲರನ್ನು ಸುರಕ್ಷಿತವಾಗಿ ಇಂಗ್ಲೆಂಡಿಗೆ ಕಳಿಸಿದರು. ನಮ್ಮ ನೆಲ ನಮಗೆ ಕೊಡಿಸಿದರು. ಅದಕ್ಕಾಗಿ ಅವರನ್ನು ನಾವು ಬಾಪೂಜಿ, ಗಾಂಧೀಜಿ, ರಾಷ್ಟ್ರಪಿತಾ ಇತ್ಯಾದಿ ಹೆಸರುಗಳಿಂದ ಆತ್ಮೀಯವಾಗಿ ಗೌರವದಿಂದ ಕರೆಯುತ್ತೇವೆ.

ಹೀಗೆ ಏಕಾದಶ ವ್ರತಗಳ ದಟ್ಟವಾದ ಬಲದಮೇಲೆ ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ನೀಡಿ ಸ್ವಾವಲಂಬನ ತತ್ತ್ವದ ಆಧಾರದ ಮೇಲೆ ಸ್ವರಾಜ್ಯವನ್ನು ತಂದು ಕೊಟ್ಟುದುದೇ ರಾಮರಾಜ್ಯ. ಈ ರಾಮರಾಜ್ಯದ ಅರ್ಥ ನ್ಯಾಯಪ್ರೇಮ

ಅಹಿಂಸೆಯಿಂದ ಕೂಡಿದ ರಾಜ್ಯ. ಕರ್ತವ್ಯಪಾಲನೆ, ಧರ್ಮ ಜಾತಿ ಸಹಿಷ್ಣುತೆಗಳಿಂದ ಕೂಡಿದ ಸುಖೀರಾಜ್ಯ, ಬಡವರು-ಬಲ್ಲಿದರು, ಹಸಿವು-ತೃಪ್ತಿ, ಜ್ಞಾನ-ಅಜ್ಞಾನ ಇವುಗಳ ಕಂದರಗಳಿಲ್ಲದೆ ಬಡತನ ಅಜ್ಞಾನಗಳನ್ನು ನಿರ್ಮೂಲನ ಮಾಡಿ ಹಸಿವು ಅಜ್ಞಾನಗಳನ್ನು ಹೊಡೆದೋಡಿಸಿದ ಸಂತೃಪ್ತಿರಾಜ್ಯ. ಒಕ್ಕಲತನವನ್ನು ಊರ್ಜಿತ ಸ್ಥಿತಿಯಲ್ಲಿಟ್ಟು, ಸ್ತ್ರೀಯರಿಗೆ ಸಮಾನ ದರ್ಜೆಯನ್ನಿತ್ತು ಸೈನ್ಯದ ವೆಚ್ಚವನ್ನು ಕ್ಲಿಪ್ತವಾಗಿಟ್ಟು ಸಾಗುವುದೇ ಸಮಾನ ಸುಖೀರಾಜ್ಯ. ರಾಜ್ಯದ ಶಾಸನಗಳನ್ನು ಪಾಸುಮಾಡುವ ಪ್ರತಿನಿಧಿಗಳು ಮತ್ತು ಅವುಗಳನ್ನು ಜಾರಿಯಲ್ಲಿ ತರುವ ಅಧಿಕಾರಿಗಳಲ್ಲಿ ಧರ್ಮಬುದ್ಧಿ ಜಾಗೃತವಾಗಿದ್ದು ಅವರೆಲ್ಲ ಅನುಷ್ಠಾನ ಶೀಲರಾಗಿದ್ದರೇ ಅದೇ ಗಾಂಧೀತಾತ ಬಯಸಿದ್ದ ನೆಮ್ಮದಿ ರಾಜ್ಯ, ಇಂತಹ ರಾಜ್ಯದಲ್ಲಿ ರಾಷ್ಟ್ರೀಯ ಏಕತೆ, ಅಸ್ಪೃಶ್ಯತಾ ನಿವಾರಣೆ, ಮದ್ಯನಿಷೇಧ, ಖಾದಿ, ಮೂಲಶಿಕ್ಷಣ, ಪ್ರೌಢಶಿಕ್ಷಣ, ಸ್ತ್ರೀಶಿಕ್ಷಣ, ಆರ್ಥಿಕ ಸಮಾನತೆ, ಗೋಸೇವಾ ಇತ್ಯಾದಿ ರಚನಾತ್ಮಕ ಕಾರ್ಯಗಳನ್ನು ಸ್ವಪ್ರೇರಣೆಯಿಂದಲೇ ಸರ್ವರೂ ನಿರತರಾಗಿರಬೇಕಾಗುತ್ತದೆ.

ಈ ತಳಹದಿಯ ಮೇಲೆ ನಿರೂಪಿತಗೊಂಡ ನಮ್ಮ ಸ್ವತಂತ್ರ ಭಾರತವು ಪ್ರಜಾಪ್ರಭುತ್ವದ ಮಾದರಿಯ ಸರಕಾರವನ್ನು ಕಟ್ಟಿ ಪ್ರಜಾಪರಿಪಾಲನೆಯನ್ನು ಮಾಡುತ್ತಿದೆ. ಪ್ರಜಾಪ್ರಭುತ್ವವೆಂದು ಪ್ರಜೆಗಳ ಹಿತಸಾಧನೆಗಾಗಿ ಪ್ರಜಾಪ್ರತಿನಿಧಿಗಳು ಸೇವಾಭಾವನೆಯಿಂದ ರಾಜ್ಯಸೂತ್ರಗಳನ್ನು ನಡೆಸುವುದು. ಈ ಕುರಿತು ಬಾಪೂಜಿಯವರು ತಮ್ಮ ವಿಚಾರಗಳನ್ನು ಹರಿಜನ ಪತ್ರಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ ಇವುಗಳಲ್ಲಿ ಕೆಲವನ್ನು ನೆನಪಿಸಿಕೊಳ್ಳುವುದು ಉಚಿತವಾಗಿದೆ.

"ಪ್ರಜಾಪ್ರಭುತ್ವ ಒಂದು ಮಹಾಸಂಸ್ಥೆ. ಇಂಥ ದುರುಪಯೋಗದ ಅವಕಾಶವೇನೋ ಇರುತ್ತದೆ. ಆದರೆ ಅಂಥಲ್ಲಿ ಬಗ್ಗುಬಡಿಯಲೇ ಬೇಕು. ಜನತಾ ರಾಜ್ಯವು ಸಾರ್ವಜನಿಕ ಅಭಿಪ್ರಾಯಕ್ಕಿಂತ ಮುಂದಾಗಿ ಕೆಲಸ ಮಾಡಬಾರದು. ಆದ್ದರಿಂದ ಪ್ರಬುದ್ಧವೂ ಶಿಷ್ಟಪಾಲಕವೂ ಆದ ಪ್ರಜಾಪ್ರಭುತ್ವವು ಅತ್ಯುತ್ತಮವಾದ ವಸ್ತು. ದ್ವೇಷ ಅಜ್ಞಾನ ಅಂಧಾನುಕರಣೆಗಳಿಂದ ಪ್ರಜಾಪ್ರಭುತ್ವ ತನ್ನಿಂದ ತಾನೇ ಹತವಾಗುತ್ತದೆ. ಎದುರಾಳಿಯ ಅಭಿಪ್ರಾಯವನ್ನು ತಿಳಿದಿರುವ ಔದಾರ್ಯವನ್ನು ಪಡೆದಿರಬೇಕಾಗುತ್ತದೆ. ಆದ್ದರಿಂದ ಪ್ರತಿಪಕ್ಷವಿಲ್ಲದೆ ವ್ಯಕ್ತಿ ಸ್ವಾತಂತ್ರ್ಯ ಬೆಳೆಯಲಾರದು. ಈ ಹಿನ್ನೆಲೆಯಲ್ಲಿ ಪರಿಶುದ್ಧವಾದ ಅಹಿಂಸೆಯ ಆಳ್ವಿಕೆಯಲ್ಲಿ ವ್ಯಕ್ತಿಸ್ವಾತಂತ್ರ್ಯದ ವಿರಸನಕ್ಕೆ ಅವಕಾಶವಿರಬೇಕು"....

—ಇದು ಬಾಪೂಜಿಯ ಸ್ವರಾಜ್ಯ ಪ್ರಜಾರಾಜ್ಯ ಪ್ರಜಾಪ್ರಭುತ್ವದ ಕಲ್ಪನೆ. ಅದನ್ನು ಅವರು ಕೊಡಿಸಿದರು. ಅದು ವಿಧಾಯಕ ಕಾರ್ಯಗಳಿಗಾಗಿ ಲೈಸನ್ಸ್. ಈಗ ಸ್ವಾತಂತ್ರ್ಯ ಸಿಕ್ಕು 38 ವರ್ಷಗಳು ಸಂದವು. 38ರಲ್ಲಿ ಪಾದಾರ್ಪಣ ಮಾಡಿ

ದ್ದೇವೆ. ಸಾಕಷ್ಟು ಪ್ರಬುದ್ಧರಾಗಿದ್ದೇವೆ, ವಿವೇಕ ಬಲಿತಿದೆ. ಆದರೆ ಲೆಕ್ಕಪತ್ರವನ್ನು ನೋಡಿದರೆ, ಆತ್ಮಸಾಕ್ಷಿಯಾಗಿ ಅಂತರಂಗವನ್ನು ವಿಮರ್ಶಿಸಿಕೊಂಡರೆ ನಾವು ಸಾಧಿಸಿದ್ದೇನು? ಲೆಕ್ಕ ಯಾವ ದಿಕ್ಕಿಗೆ. ಒಂದು ಕಡೆಗೆ ಹೊರಗಿನ ಚೆಲುವೇನೋ ಕಾಣುತ್ತಿದೆ. ಆದರೆ ಇನ್ನೊಂದು ಕಡೆ ಅಂತರಂಗವನ್ನು ಬಗೆದು ನೋಡಿದರೆ ಕಂದರದಲ್ಲಿ ಅಸತ್ಯ, ಅಹಿಂಸೆ, ಅಧೃಡತೆ, ಸ್ವಾದ, ಕಳ್ಳತನ, ಪರಿಗೃಹ, ಭಯ, ಅಸ್ಪರ್ಶತೆ, ನಿರಾಯಾಸಪ್ರವೃತ್ತಿ, ಅಸಹಿಷ್ಣುತೆ—ಇತ್ಯಾದಿ ವ್ರತಗಳು ನಡೆದಿವೆ. ಇವುಗಳನ್ನು ಕಾಡುಮೃಗಗಳೆನ್ನೋಣವೇ? ಛೀ ಬೇಡ, ಅವುಗಳಿಂದಲೂ ಕಲಿಯಬೇಕಾದ ಪಾಠಗಳು ಬೇಕಾದಷ್ಟು ಇರುತ್ತವೆ. ಹೀಗೆ ನಡೆದ ಪ್ರಜಾಪ್ರಭುತ್ವದಿಂದ ಗಾಂಧೀಜಿ ರಾಮರಾಜ್ಯ, ಸ್ವರಾಜ್ಯವು ರಾಕ್ಷಸೀ ರಾಜ್ಯವಾಗುತ್ತದೆ. ಅದಕ್ಕಾಗಿ ಬಾಪೂಜಿ ಅವರನ್ನು ನೆನೆಯಬೇಕಾದ ಪ್ರತಿಕ್ಷಣದಲ್ಲಿಯೂ, ಇನ್ನು "ಮುಂದೆಯಾದರೂ ನಾವೆಲ್ಲ ಸರಿಯಾಗಿ ನಡೆದು ಭಾರತದ ಏಕತೆಯನ್ನು ಕಾಯಾ ವಾಚಾ ಮನಸಾ ಕಾಯುತ್ತೇವೆ" "ಎಂದು ಪಣತೊಟ್ಟು ನಡೆದು ತೋರಿಸಿದಾಗ ಮಾತ್ರ ಬಾಪೂಜಿಗೆ ತೃಪ್ತಿ. ಆದ್ದರಿಂದ ಬಾಪೂಜಿ ನಮ್ಮ ತಪ್ಪುಗಳನ್ನೆಲ್ಲ ಕ್ಷಮಿಸಲೆಂದು ಕೇಳಿಕೊಳ್ಳೋಣ." ನಾನು ಹಿಮಾಲಯದೆತ್ತರ ತಪ್ಪು ಮಾಡಿದೆನು." "ಎಂಬ ನೋವನ್ನು ಶ್ರೀರಾಮನ ಸನ್ನಿಧಿಯಲ್ಲಿರುವ ಆ ಬಾಪು ಮತ್ತೆ ಮತ್ತೆ ನೊಂದು ನುಡಿಯದಿರಲೆಂದು ಪ್ರಾರ್ಥಿಸೋಣ.

**ರಘುಪತಿ ರಾಘವ ರಾಜಾರಾಂ**
**ಪತಿತಪಾವನ ಸೀತಾರಾಂ**
**ಈಶ್ವರ ಅಲ್ಲಾ ತೇರೆನಾಂ**
**ಸಬಕೊ ಸನ್ಮತಿ ದೇ ಭಗವಾನ್.**

---

'ಸಿದ್ಧಗಂಗಾ' ಓದುಗರಿಗೆ ಯುಗಾದಿಯ ಶುಭಾಶಯಗಳು.

ಅಭಿಮಾನಿಗಳೇ,

ಸಿದ್ಧಗಂಗಾ ಇದುವರೆವಿಗೆ ಶರಣತತ್ವ ಧರ್ಮ-ಸಂಸ್ಕೃತಿ ಸಾಹಿತ್ಯ - ವೈಜ್ಞಾನಿಕ ಪ್ರಗತಿಪರ ಲೇಖನಗಳನ್ನು ಒದಗಿಸಿದೆ. ಅವುಗಳ ಬಗ್ಗೆ ತಮ್ಮಿಂದ ನೇರವಾದ ಅಭಿಪ್ರಾಯಗಳನ್ನು ಬಯಸಿದೆ. ಸಿದ್ಧಗಂಗಾ ಮುಂದಿನ ಸಂಚಿಕೆಗಳಲ್ಲಿ ಸುಂದರ ಹಾಗೂ ಭೋದಪ್ರದಗೊಳ್ಳುವುದಕ್ಕೆ ಎಲ್ಲಾ ಅಭಿಮಾನಿಗಳಿಂದಲೂ ಸಲಹೆ ಸೂಚನೆಗಳನ್ನು ಬಯಸಿದೆ. ದಯವಿಟ್ಟು ಪತ್ರಿಕೆಯ ಕಾರ್ಯಾಲಯಕ್ಕೆ ಬರೆದು ತಿಳಿಸಲು ವಿನಂತಿಸಿದೆ.

# ಯುಗಾದಿ

—ಎನ್. ರಾಘವೇಂದ್ರ, ಉಪ ಸಂಪಾದಕರು.
"ವಿನೋದ" ಮಾಸಪತ್ರಿಕೆ, ನಂ.3, ಬಿ. ಸಿ. ಸಿ. ಬ್ಯಾಂಕ್ ಕಟ್ಟಡ
ಚಾಮರಾಜ ಪೇಟೆ, ಬೆಂಗಳೂರು-18.

"ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ"

ಕವಿ ದ.ರಾ. ಬೇಂದ್ರೆಯವರ ಈ ಸಾಲುಗಳುಳ್ಳ ಈ ಕವನವು ಯುಗಾದಿ ಯಂದು ಕಣ್ಣಿಗೆ ಕಾಣುವ ಪ್ರಕೃತಿಯ ಸೊಬಗು ನಿಮ್ಮ ಕಣ್ಣಮುಂದೆ ನಿಲ್ಲುತ್ತದೆ.

ಯುಗದ ಆದಿ ಯುಗಾದಿ. ಹೊಸ ವರುಷದ ಮೊದಲನೆಯ ದಿನ ಆಚರಿಸುವ ಹಬ್ಬವೇ ಯುಗಾದಿ. ಈ ಯುಗಾದಿಯ ಹಬ್ಬವು ಹಿಂದುಗಳ ಮೊದಲನೆಯ ಹಬ್ಬ. ಚೈತ್ರ ಶುದ್ಧ ಪ್ರತಿಪದೆಯ ದಿವಸ ಬ್ರಹ್ಮದೇವನಿಂದ ಈ ಸೃಷ್ಟಿಯ ಉತ್ಪತ್ತಿಯಾಯಿತು. ಹೀಗಾಗಿ ಈ ದಿನವೇ ಮೊದಲನೆಯ ದಿನ ಎಂದು ಪರಿಗಣಿತವಾಯಿತು ಎಂದು ಬ್ರಹ್ಮಾಂಡ ಪುರಾಣ ಹೇಳುತ್ತದೆ.

ಯುಗಾದಿಗೆ ಮುಂಚೆ ಬರುವ ಹಬ್ಬ ಹೋಳಿ. ಈ ಹೋಳಿ ಹಬ್ಬದಲ್ಲಿ ಕಾಮನನ್ನು ಸುಟ್ಟು ಭಸ್ಮ ಮಾಡಿರುತ್ತಾರೆ. ಹೀಗಾಗಿ ಕಾಮನಿಲ್ಲದ ಜೀವ ಉತ್ಸಾಹವಿಲ್ಲದ್ದು. ಸೃಷ್ಟಿಯ ಸೊಬಗು ಬರಡೇ ಸರಿ. ಈ ಬರಡನ್ನು ತುಂಬಿಕೊಡುವುದಕ್ಕೆ ನಾಂದಿ ಯುಗಾದಿ ಹಬ್ಬ. ಈ ಹಬ್ಬದ ಹೊತ್ತಿಗೆ ವಸಂತಋತು ಕಾಲಿರಿಸಿ, ಸೃಷ್ಟಿಯ ಎಲ್ಲ ಗಿಡಮರಗಳು ಚಿಗುರನ್ನು ತುಂಬಿಕೊಂಡು ಯೌವ್ವನದಿಂದ ಬೀಗುತ್ತಿರುತ್ತದೆ. ಮಾವಿನ ಮರವಂತೂ ತುಂಬು ಗರ್ಭಿಣಿಯಂತೆ ಮಾವಿನ ಕಾಯಿಗಳನ್ನು ನೇತಾಡಿಸಿ ಕೊಳ್ಳುತ್ತಾ, ತುಂಬಾ ಸಂತೋಷದಿಂದ ಕೋಗಿಲೆಯನ್ನು ಆಹ್ವಾನಿಸಿ; ಅದರ ಇಂಪಾದ ದನಿಯನ್ನು ಆಸ್ವಾದಿಸುತ್ತಾ ಬೀಗುತ್ತಿರುತ್ತದೆ. ಅಂತೂ ಒಟ್ಟಾರೆ ಸೃಷ್ಟಿಯ ಎಲ್ಲ ಅವಯವಗಳು ಹೊಸ ಹುರುಪಿನಿಂದ ಕಂಗೊಳಿಸಿರುತ್ತದೆ.

ಯುಗಾದಿಯ ಹಿಂದಿನ ದಿನ ಅಮಾವಾಸೆ. ಅಮಾವಾಸ್ಯೆ ಕತ್ತಲೆಯ ದುಃಖದ ಪ್ರತೀಕ. ಇಂತಹ ಕತ್ತಲೆಯನ್ನು ಬಡಿದೋಡಿಸಿ ಜಗತ್ತಿನ ಎಲ್ಲ ಜನಕ್ಕೆ ಚೇತನ ಯುಗಾದಿ. ಅಂದು ಬೇವು ಬೆಲ್ಲಗಳದೇ ಸಾಮ್ರಾಜ್ಯ. ಬೇವಿನ ಸೊಪ್ಪಿನಿಂದ ಕೂಡಿ ಕುದಿಸಿದಂತ ನೀರನ್ನು ಎಲ್ಲರೂ ಸ್ನಾನ ಮಾಡುತ್ತಾರೆ. ಇದಕ್ಕೆ ಮುಂಚೆ ಎಣ್ಣೆಯಿಂದ ಚೆನ್ನಾಗಿ ತೋಯ್ದ ಮೈಯನ್ನು ಈ ಬಿಸಿ ನೀರಿನ ಮೂಲಕ ಹಗುರ ಮಾಡಿ ಕೊಳ್ಳುತ್ತಾರೆ.

# ಈ ಚಿರಸ್ಮರಣೀಯ ದಿನದಂದು

**35 ವರ್ಷಗಳ ಹಿಂದೆ ಭಾರತದ ಜನತೆ ತನ್ನ ಆಶೆ, ಆಕಾಂಕ್ಷೆಗಳನ್ನು ವಿಜಯ ಪತಾಕೆಯೊಂದಿಗೆ ಅಭಿವ್ಯಕ್ತ ಗೊಳಿಸಿತು.**

ನಮ್ಮ ದೇಶದ ಪ್ರತಿಯೊಂದು ರಾಜ್ಯವೂ ಜನತೆಯ ಆಸೆ, ಆಶೋತ್ತರಗಳನ್ನು ಪ್ರತಿಬಿಂಬಿಸುತ್ತದೆ. ಇಡೀ ರಾಷ್ಟ್ರದ ವೈಭವವನ್ನು ಸಾರುತ್ತದೆ. ಪ್ರತಿ ರಾಜ್ಯವೂ ಈ ದಿಸೆಯಲ್ಲಿ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಕರ್ನಾಟಕ ಈ ನಿಟ್ಟಿನಲ್ಲಿ ಸುದೀರ್ಘ ಇತಿಹಾಸ ಹೊಂದಿದೆ.

**ಜಾತ್ಯತೀತ, ಪ್ರಗತಿಪರ ಐಕ್ಯಭಾರತ ನಿರ್ಮಾಣಕ್ಕೆ ಇಂದು ಮತ್ತೊಮ್ಮೆ ಪಣ ತೊಡೋಣ**

ಅನಾದಿ ಕಾಲದಿಂದಲೂ ಕರ್ನಾಟಕದ ಜನತೆ ಸಹಿಷ್ಣು ಪರರು. ಇಲ್ಲಿ ಜೈನ ಮತ್ತು ಬೌದ್ಧ ಮತಗಳು ಪ್ರವರ್ಧಮಾನ ಗೊಂಡವು. ಕರ್ನಾಟಕದೊಂದಿಗೆ ಶಂಕರ, ಮಾಧ್ವ, ರಾಮಾನುಜ ಮತ್ತು ಬಸವಣ್ಣನವರ ನಂಟು ಅಪಾರ, ಅಮೋಘ. ಅನಂತರ ಮುಸಲ್ಮಾನರ ಮತ್ತು ಕ್ರೈಸ್ತ ಗುರುಗಳು ಹಿಂದೂ ಸಂತರು ಸಹಿಷ್ಣುತೆಯ ತತ್ವವನ್ನು ಶ್ರೀಮಂತಗೊಳಿಸಿದರು. ಇಂದಿಗೂ ಗುಡಿಗೋಪುರಗಳು, ಇಗರ್ಜಿಗಳು, ಮಸೀದಿಗಳು ಒಂದರೊಡನೊಂದು ಇರುವುದೇ ಇದಕ್ಕೆ ಸಾಕ್ಷಿ.

**ಇಂದು ಕರ್ನಾಟಕದ ಜನತೆ ಅವರ ಗುರಿಯತ್ತ ಮುನ್ನಡೆದಿದ್ದಾರೆ.**

ಇದು ಕರ್ನಾಟಕ ರಾಜ್ಯ. ಪರರ ಬಗ್ಗೆ ಅಪಾರ ಆದರ, ದ್ವೇಷ ರಹಿತ, ಸಹನಾಭಾವ, ಪ್ರಾಯಶಃ ಇತಿಹಾಸ ಕಲಿಸಿ ಕೊಟ್ಟ ಪಾಠ. ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮೌರ್ಯರು ಮತ್ತು ವಿಜಯನಗರದ ರಾಯರುಗಳು ತಮ್ಮ ಶ್ರೀಮಂತ ಸಂಸ್ಕೃತಿಯನ್ನು ಇಲ್ಲಿ ಉಳಿಸಿ ಹೋಗಿದ್ದಾರೆ. ಅನಂತರ ಬಿಜಾಪುರದಲ್ಲಿ ಮುಸಲ್ಮಾನರು,

ಮಂಗಳೂರಿನಲ್ಲಿ ಕ್ರೈಸ್ತರು, ಈ ಸಂಸ್ಕೃತಿಗೆ ತಮ್ಮದೇ ಆದ ವೈಶಿಷ್ಟ್ಯವನ್ನು ಲೇಪಿಸಿದ್ದಾರೆ.

ರಾಜ್ಯದಲ್ಲಿ ಕವಿಗಳು, ದಾರ್ಶನಿಕರು, ತತ್ವಜ್ಞಾನಿಗಳು ಜನಿಸಿದ್ದು ಶತಮಾನಗಳಿಂದ ಇವರುಗಳು ಜನತೆಯ ಮನಸ್ಸನ್ನು ಸುರೂಪಗೊಳಿಸಿದ್ದಾರೆ.

19ನೆಯ ಶತಮಾನದ ಅಂತ್ಯದ ವೇಳೆಗೆ ರಾಷ್ಟ್ರೀಯ ಭಾವ ಉದ್ದೀಪನಗೊಂಡು ದೇಶಭಕ್ತಿ ಪ್ರಚೋದನೆಗೊಂಡಿತು. ಟಿಪ್ಪು ಸುಲ್ತಾನರಿಂದ ಕಿತ್ತೂರ ರಾಣಿ ಚೆನ್ನಮ್ಮನವರೆಗೆ ನಾನಾ ಮತಗಳ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಗಳಿಕೆಗೆ ಶ್ರಮ ವಹಿಸಿದ್ದಾರೆ.

ಇಂದು ಕರ್ನಾಟಕ ಇತರ ರಾಜ್ಯಗಳೊಂದಿಗೆ ಒಂದಾಗಿ ಗತವೈಭವಕ್ಕನುಗುಣವಾದ ನವ ಭಾರತ ನಿರ್ಮಾಣದಲ್ಲಿ ಕ್ರಿಯಾ ಶೀಲವಾಗಿದೆ.

ಕೈಗಾರಿಕಾ ಕ್ರಾಂತಿಯಲ್ಲೂ ಕರ್ನಾಟಕ ಮುಂಚೂಣಿ ಯಲ್ಲಿದೆ. ವಿಶ್ವೇಶ್ವರಯ್ಯನವರಂತಹ ದಿಗ್ಗಜರು ಹಾಕಿದ ದಾರಿ ಯಲ್ಲಿ ನಡೆದಿದೆ. ಇಂದು ಎಲ್ಲರಿಗೂ ಶಿಕ್ಷಣ ಉಚಿತವಾಗಿ ಲಭ್ಯ ವಾಗಿದೆ. ಶೇಕಡ 80ಕ್ಕೂ ಹೆಚ್ಚು ಗ್ರಾಮೀಣ ಪ್ರದೇಶಗಳಿಗೆ ಕುಡಿಯುವ ನೀರು ಮತ್ತು ವಿದ್ಯುಚ್ಛಕ್ತಿ ಒದಗಿಸಲಾಗಿದೆ. ಶಿಶು ಮತ್ತು ಮಹಿಳಾ ಕಲ್ಯಾಣ ಮತ್ತು ಗ್ರಾಮಾಂತರ ಪ್ರದೇಶದ ಜನರ ಆರೋಗ್ಯಕ್ಕೆ ಗಮನ. ಜನತೆಯ ಆಶಯಗಳನ್ನು ಕ್ರಮೇಣ ಈಡೇರಿಸಲಾಗುತ್ತಿದೆ. ಸಾರಿಗೆ ಸಂಪರ್ಕವ್ಯವಸ್ಥೆ ತೀವ್ರಗತಿ ಯಲ್ಲಿ ಬೆಳೆಯುತ್ತಿದೆ. ದೀನರ ಉದ್ಧಾರ, ದಲಿತರ ಕಲ್ಯಾಣಕ್ಕೆ ಅಗಾಧ ಶ್ರಮ ವಹಿಸಲಾಗುತ್ತಿದೆ.

ಎಲ್ಲಾ ಮತಗಳ, ಜಾತಿಗಳ, ವರ್ಗಗಳ, ಭಾಷೆಗಳ ಜನರು ಇಲ್ಲಿ ಅನ್ಯೋನ್ಯವಾಗಿ ಬಾಳುತ್ತಿದ್ದು ಅಭ್ಯುದಯದತ್ತ ಮುನ್ನಡೆದಿದ್ದಾರೆ.

**ಸಾಧಿಸಬೇಕಾದುದು ಇನ್ನೂ ಬಹಳವಿದೆ.**

## ಕರ್ನಾಟಕ ವಾರ್ತೆ

ಇಲ್ಲಿ ಬೇವು ಮತ್ತು ಎಣ್ಣೆ ಸಾಂಕೇತಿಕವಾಗಿ ಇಲ್ಲವೇ ಯಾವುದೇ ಮೂಢ ನಂ
ಬಿಕೆಯ ಆಚರಣೆಯಾಗಿ ಬಂದಿಲ್ಲ. ಬೇವು ಆರೋಗ್ಯ ವರ್ಧಕ ಹಾಗೂ ಆರೋ
ದಾಯಕ. ಹಿಂದಿನ ಮುನಿಗಳು ದಿನವೂ ತಮ್ಮ ಆಹಾರದ ಜೊತೆಗೆಬೇವನ್ನು ಸ್ವ
ದೇಹಕ್ಕೆ ಸೇವಿಸುತ್ತಿದ್ದರು; ಬೇವು ಎಷ್ಟು ಕಹಿಯೋ, ಅಷ್ಟೇ ಮನುಷ್ಯನ ಮಿತ್ರ. ದೇ
ದಲ್ಲಿ ಕಹಿಯು ಅಂದರೆ ಬೇವಿನ ಅಂಶ ರಕ್ತಕ್ಕೆ ಪೋಷಕವಾಗುವಂತೆ ತಿಂದು ಜೀರ್ಣ
ಕೊಂಡರೆ ಆ ದೇಹವನ್ನು ಚೇಳು, ಹಾವು ಮುಂತಾದ ವಿಷ ಜಂತುಗಳು ಕಡಿದರ
ದೇಹಕ್ಕೆ ಯಾವ ಅಪಾಯುವಾಗುವುದಿಲ್ಲ ಎಂಬುದು ನಂಬಿಕೆ. ಹೀಗಾಗಿ ಬೇವನ
ನಮ್ಮ ಹಿಂದಿನ ತಲೆಮಾರಿನ ಜನ ಸೇವಿಸುತ್ತಿದ್ದರು. ಆದ್ದರಿಂದಲೇ ಈಗಲೂ ನವ
ಹಳ್ಳಿಯ ಊರ ಬಾಗಿಲಿನಲ್ಲಿ ಬೇವು-ಅರಳಿಯ ಮರಗಳು ಕಾಣುವುದು. ಜೊತೆಗೆ ಬೇ
ಚರ್ಮ ವ್ಯಾಧಿಗೆ ಸಿದ್ಧೌಷಧ. ಕಜ್ಜಿ, ಗಜಕರ್ಣ ಮುಂತಾದ ಚರ್ಮ ವ್ಯಾಧಿಗಳಿ
ಬೇವು ಬೇಕೆ ಬೇಕು. ಹೀಗಾಗಿ ಆರೋಗ್ಯ ದೃಷ್ಟಿಯಿಂದ ನಮ್ಮ ತಲೆಮಾರಿನ ಜ
ಬೇವಿನ ಸೊಪ್ಪಿನಿಂದ ಕುದಿಸಿದ ನೀರನ್ನು ಸ್ನಾನ ಮಾಡುವುದು. ಗರ್ಭಿಣಿಯರಿ
ಬೇವಿನ ಸೊಪ್ಪಿನಿಂದ ಕೂಡಿದ ಸ್ನಾನವನ್ನು ಮಾಡಿಸುತ್ತಾರೆ. ಇದಕ್ಕೆ ಕಾರಣ
ವೇನೆಂದರೆ ಬೇವು ದೇಹದ ಉಷ್ಣತೆಯನ್ನು ಸಮತೋಲದಲ್ಲಿರಿಸಿಕೊಂಡಿರುತ್ತದೆ
ಜೊತೆಗೆ ಇಂದಿಗೂ ಕೆಲವರು ಹಲ್ಲನ್ನು ಶುಭ್ರಗೊಳಿಸಲು ಬೇವಿನ ಕಡ್ಡಿಯನ್ನು ಉ
ಯೋಗಿಸುತ್ತಾರೆ. ಇದರಿಂದ ಹಲ್ಲು ಹುಳುಕಾಗಲು ಕಾರಣವಾಗುವಂತ ಕ್ರಿಮಿ
ಯನ್ನು ಬೇವು ಸಾಯಿಸುತ್ತದೆ. ಆದ್ದರಿಂದ ಹಲ್ಲು ಹುಳುಕಾಗದೆ ದೀರ್ಘಕಾಲ
ಹಲ್ಲು ಬಾಳಿಕೆ ಬರುತ್ತದೆ.

ಯುಗಾದಿ ಹಬ್ಬದ ದಿನವೇ ಏಕೆ ಎಣ್ಣೆ ಸ್ನಾನ ಮಾಡಬೇಕು ? ಎಂಬುದು
ಪ್ರಶ್ನೆ. ಯುಗಾದಿ ಬರುವ ವೇಳೆಗೆ ಬೇಸಿಗೆ ಪ್ರಾರಂಭವಾಗಿ, ಬಿಸಿಲು ಹೆಚ್ಚಿರು
ತ್ತದೆ. ಹೀಗಾಗಿ ಪ್ರಕೃತಿಯಲ್ಲಿ ಉಷ್ಣತೆ ಹೆಚ್ಚಿ ದೇಹದ ಉಷ್ಣತೆಯೂ ಹೆಚ್ಚಾಗು
ತ್ತದೆ. ಹೀಗೆ ಹೆಚ್ಚಾದ ದೇಹದ ಉಷ್ಣತೆಯನ್ನು ಕಡಿಮೆ ಮಾಡಲು, ಉಷ್ಣತೆ
ಯನ್ನು ಸಮವಾಗಿಡಲು ಎಣ್ಣೆ ಸ್ನಾನ ಮಾಡುತ್ತೇವೆ.

ಸ್ನಾನದ ನಂತರ ತಮ್ಮ ಮನೆ ದೇವರಿಗೆ ಪೂಜೆ ಸಲ್ಲಿಸಿ ಬೇವು ಬೆಲ್ಲ ಸೇವಿಸು
ತ್ತಾರೆ. " ಬೆಲ್ಲ ಯಾರಿಗೆ ಬೇಡ. ಆದರೆ ಬೇವು ಎಷ್ಟು ಮಂದಿಗೆ ಬೇಕು " ನಿಜ,
ಬೆಲ್ಲ ಜೀವನದ ಸುಖದ ಸಂಕೇತ ಸುಖ ಯಾರಿಗೆ ಬೇಡ. ಕಷ್ಟ ಪಟ್ಟು ಬೆವರು
ಸುರಿಸಿ ಸಂಪಾದಿಸುವ ಯೋಚನೆ ಎಷ್ಟು ಮಂದಿಗಿದೆ? ಮೋಸದಿಂದಲೇ ತಲೆ
ಒಡೆಯುವುದರ ಮೂಲಕವೋ ಕಂಡವರ ಆಸ್ತಿ ಲಪಟಾಯಿಸಬೇಕು ಎಂಬುದು
ಕೆಲವರ ಬಯಕೆ, ಅದೇ ಉದ್ಯೋಗ; ಆದರೇ ಬರೀ ಬೆಲ್ಲವನ್ನೆ ದೇಹಕ್ಕೆ ಹೆಚ್ಚು
ಸೇವಿಸಿದರೆ ದೇಹಕ್ಕೇ ಕೆಡಕು ಎಂಬುದನ್ನು ತಿಳಿಯಬೇಕು. ಕಹಿಯಾದ ಬೇವು

ಮನುಷ್ಯನಿಗೂ ಕಹಿಯೇ ? ಬೇವು ಬೆಲ್ಲದ ಮಿಶ್ರಣವನ್ನು ಮನುಷ್ಯ ತೆಗೆದುಕೊಳ್ಳುವಾಗ ಹೆಚ್ಚು ಬೆಲ್ಲವಿರುವ ಭಾಗವನ್ನೇ ಸಾಮಾನ್ಯವಾಗಿ ಆರಿಸಿಕೊಳ್ಳುತ್ತಾನೆ. ಆದರೆ ಇಲ್ಲಿ ಬೇವು ಕಷ್ಟದ ಸಂಕೇತ. ಮನುಷ್ಯನ ಜೀವನ ಸಾಮಾನ್ಯವಾಗಿ ಕಷ್ಟ-ಸುಖ ಗಳ, ಏಳು-ಬೀಳುಗಳ ಮಿಶ್ರಣ. ಕೇವಲ ಸುಖದಿಂದಲೇ ಜೀವನ ಪೂರೈಸಿದರೆ, ಪರಿಪೂರ್ಣ ಜೀವನವಾಗಲಾರದು ಅದೇ ರೀತಿ ಕೇವಲ ಕಷ್ಟದಿಂದಲೇ ಜೀವನವನ್ನು ಎದುರಿಸಿದರೂ ಜೀವನ ಪೂರ್ಣವಾಗದು ಆದ್ದರಿಂದ ಮನುಷ್ಯನಿಗೆ ಕಷ್ಟ ಸುಖದ ಎರಡು ಮುಖಗಳು ಅರ್ಥವಾಗಬೇಕು. ಅದೇ ಜೀವನ. ಅದೇ ಮನುಷ್ಯತ್ವ.

ವ್ಯಕ್ತಿ ಬೇವನ್ನು ಬೆಲ್ಲದ ಜೊತೆಗೆ ಸಂತೋಷವಾಗಿ ಪೂರ್ಣ ಹೃದಯದಿಂದ ಸ್ವೀಕರಿಸಿದರೆ, ಆ ವ್ಯಕ್ತಿಯು ಜೀವನದಲ್ಲೂ ಕಷ್ಟವನ್ನು ಸುಖದಂತೆ ಸಂತೋಷವಾಗಿ ಸ್ವೀಕರಿಸುತ್ತಾನೆ. " ದುಃಖ ಪ್ರಸಂಗಗಳಿಂದಲೂ ಬೇವಿನಿಂದ ದೇಹಕ್ಕೆ ಹಿತವಾಗು ವಂತೆ–ಸುಖಕ್ಕೆ ಸಾಧನವಾಗುವ ಅನುಭವ ಬರಬಹುದು.

"ಉಂಡು ಉಗಾದಿ, ಮಿಂದು ದೀವಳಿಗೆ" ಎಂಬುದು ನಮ್ಮ ಜನಪದದ ಅನು ಭವದ ಆಣಿ ಮುತ್ತು ನಿಜ. ಯುಗಾದಿಯಲ್ಲಿ ಎಂತಹ ಕಡುಬಡವನಾದರೂ ಸಹ ಸಾಲ ಮಾಡಿಯಾದರೂ ಹೋಳಿಗೆ ತಿನ್ನುತ್ತಾನೆ. ಮನುಷ್ಯ ತನ್ನ ಮುಂದಿನ ದಿನ ಗಳ ಕಷ್ಟದ ಪರಿವೆಯನ್ನು ಯೋಚಿಸದೆ ಈ ಹಬ್ಬದಂದು ಸಂತೋಷದಿಂದ ಉಂಡು, ಹಬ್ಬದ ಸಡಗರವನ್ನು ಪೂರ್ಣವಾಗಿ ಅನುಭವಿಸುತ್ತಾನೆ ಅಂತೂ ಒಟ್ಟಾರೆ ಯುಗಾದಿ ಎಲ್ಲ ಹಿಂದುಗಳ ಮೊದಲನೆಯ ಹಬ್ಬ.

ರಕ್ತಾಕ್ಷಿ ಸಂವತ್ಸರವು ಮುಗಿದು, ಶ್ರೀ ಕ್ರೋಧನ ಸಂವತ್ಸರ ಪ್ರಾರಂಭವಾಗುವ ಈ ವರ್ಷ ಸಿದ್ಧಗಂಗಾ ಓದುಗರಾದ ತಮಗೆ ಶುಭವನ್ನು ದೇಶಕ್ಕೆ ಕಲ್ಯಾಣವನ್ನು ತರಲಿ ಎಂದು ಹಾರೈಸುತ್ತೇನೆ.

## ಸಿದ್ಧಗಂಗಾ ಮಾಸ ಪತ್ರಿಕೆಯ ವಿವರ

| | | | |
|---|---|---|---|
| ೧. | ವಾರ್ಷಿಕ ಚಂದಾ | ರೂ. | ೨೦-೦೦ |
| ೨. | ಆಜೀವ ಸದಸ್ಯತ್ವ | ರೂ. | ೨೦೧-೦೦ |
| ೩. | ಪೋಷಕರು | ರೂ. | ೧೦೦೧-೦೦ |
| ೪. | ಮಹಾ ಪೋಷಕರು | ರೂ. | ೨೦೦೧-೦೦ |

ಪತ್ರಿಕೆಗೆ ಆರ್ಥಿಕ ಸಹಾಯ ನೀಡಿ ಅಭಿವೃದ್ಧಿಗೆ ಕಾರಣರಾಗಿ.

ಪತ್ರ ವ್ಯವಹಾರ ಮಾಡುವಾಗ ನಿಮ್ಮ ಚಂದಾ ನಂಬರು ಮತ್ತು ಚಂದಾ ಏಂಜೆಟರ ಹೆಸರನ್ನು ಬರೆದು ತಿಳಿಸಿರಿ.

# ಗ್ರಾಮಾಂತರ ಬಸವಜಯಂತಿ

—ಹೆಚ್. ವಿ. ವೀರಭದ್ರಯ್ಯ

ಹರಿಕಾರನಹಳ್ಳಿ, ತುರುವೇಕೆರೆ ತಾಲ್ಲೂಕು. ತೆಂಗು ತಲೆದೂಗಿ ಸಿಹಿ ಕುಂ
ಗಳನ್ನು ನೀಡಿ ಸ್ವಾಗತಿಸುವ ನಯನ ಮನೋಹರ ದೃಶ್ಯ. ಮುಗ್ಧ ಗ್ರಾಮೀಣ ಬಂಧು
ಗಳ ಹಂಬಲ. ಬಸವಣ್ಣನವರ ನಾಟಕವಾಡಿಸಬೇಕು ಎಂಬ ಆಸೆ. ಅದಕ್ಕಾಗಿ ಸಿದ್ಧ
ಗಂಗಾ ಶ್ರೀಗಳವರಲ್ಲಿ ಬಿನ್ನಹ. ಪರಿಣಾಮವಾಗಿ 17–1–85 ರಂದು "ಬಸವ
ಜಯಂತಿ" ಹರಿಕಾರನ ಹಳ್ಳಿಯ ಅಂಗಳದಲ್ಲಿ. ಹರಿಕಾರ ಎಂದರೆ ಸುದ್ದಿವಾಹಕ
ಮಂಗಳವಾರ್ತೆಯನ್ನು ಹತ್ತು ದಿಕ್ಕಿಗೆ ಬಿತ್ತರಿಸುವ ತೀವ್ರ ತುಡಿತ ಹಳ್ಳಿಯ ಬಂಧು
ಗಳಿಗೆ ಭಕ್ತಿಯ ಹೆದ್ದೊರೆಯೇ ತುಂಬಿ ಪ್ರವಹಿಸಿತು.

12ನೇ ಶತಮಾನ ವಿಶ್ವದ ಇತಿಹಾಸದಲ್ಲಿಯೇ ಉಜ್ವಲ ಯುಗವಾಯಿತು.
ಬಡವರ ಬಗ್ಗೆ ಸಾಕಷ್ಟು ಆಸಕ್ತಿವಹಿಸಿ ದುಡಿದ ಚಿಂತನಶೀಲ ಚೇತನಗಳ ಪುಣ್ಯಯುಗ
ಅದು. ಅದರ ಚುಕ್ಕಾಣಿ ಹಿಡಿದ ಪುಣ್ಯಪುರುಷ ಬಸವಣ್ಣ. ಆ ಮಹಾನುಭಾವನ
ಜಯಂತಿಯ ಆಚರಣೆ. ಅರ್ಥಪೂರ್ಣವಾಗಬೇಕು. ಅದಕ್ಕಾಗಿ ಪರಮಪೂಜ್ಯ ಶ್ರೀ
ಶ್ರೀಗಳವರು ಕೈಗೊಂಡಿರುವ ಧರ್ಮಜಾಗೃತಿಯ ಚಳುವಳಿ ಗ್ರಾಮಾಂತರ ಬಸವ
ಜಯಂತಿಯಾಗಿದೆ ಎಂದವರು ಮಾಜಿ ಶಾಸಕರಾದ ಶ್ರೀ ಜಿ. ಎಸ್. ಶಿವನಂಜಪ್ಪ
ನವರು.

ಬಸವಣ್ಣನವರಂಥ, ಪ್ರಭುದೇವರಂಥ, ಅಕ್ಕಮಹಾದೇವಿಯಂಥ, ಸಿದ್ಧರಾಮ
ರಂಥ, ಚೆನ್ನಬಸವಣ್ಣನವರಂಥ ಅನುಭಾವಿಗಳಿಗೆ ಜನ್ಮಕೊಟ್ಟ ತಾಯಂದಿರು ಬಿತ್ತಿ
ಬೆಳೆದ ಸಂಸ್ಕೃತಿಯ ನಾಡಿನಲ್ಲಿಂದು ಚಾಕು, ಚೂರಿ, ಸಂಸ್ಕೃತಿಯ ಸಮೃದ್ಧ ಬೆಳೆ
ಬೆಳೆದಿದೆ, ಕಾರಣ ಕಂಡುಕೊಳ್ಳಬೇಕಾಗಿದೆ; ಪರಿಹಾರ ಪಡೆದುಕೊಳ್ಳಬೇಕಾಗಿದೆ.
ಗ್ರಾಮೀಣ ಸಂಸ್ಕೃತಿಯ ದಿವ್ಯ ಮೌಲ್ಯಗಳ ಜೀವಂತ ಶಾಸನಗಳೆನಿಸಿರುವ ಜನಪದ
ಮುಕ್ತಕಗಳ ಮೂಲಕ ಸಂಸ್ಕಾರವಂತ ಜನಾಂಗವನ್ನು, ಯುವ ಪೀಳಿಗೆಯನ್ನು
ರೂಪಿಸಿದ ತಾಯಂದಿರಿಂದು ಮತ್ತೆ ಪ್ರತಿಜ್ಞಾಪೂರ್ವಕವಾಗಿ ಮಕ್ಕಳನ್ನು ಧರ್ಮಪ್ರಜ್ಞೆ
ಯನ್ನು ಬೆಳೆಸಿಕೊಳ್ಳುವಂತೆ ಬೆಳಸಬೇಕಾಗಿದೆ, ಅದಕ್ಕೆ ಮಾರ್ಗದರ್ಶನ ಶರಣರ
ವಚನಸಾಹಿತ್ಯ, ಜನಪದ ಸಾಹಿತ್ಯಗಳಿವೆ ಎಂದರು ಶ್ರೀ ಹೆಚ್. ವಿ ವೀರಭದ್ರಯ್ಯ.

ಶ್ರೀ ವಿರೂಪಾಕ್ಷಪ್ಪನವರು ಮಾತನಾಡುತ್ತ ಬಸವಣ್ಣನವರ ಬದುಕು ವಿಸ್ಮಯಾ
ದ್ಭುತವಾದದ್ದು. ಆತ ಸನ್ಯಾಸಿಯಲ್ಲ, ಸಂಸಾರಿ, ಆದರೂ ಧರ್ಮಜಗತ್ತಿನ ಸಾರ್ವ
ಭೌಮ. ಬದುಕನ್ನು ಪ್ರೀತಿಸಿದ, ಕ್ರಿಯಾಶೀಲಗೊಳಿಸಿದ ಸಾಕ್ರಟೀಸ್‌ನಂತೆ

ಮಹಾಜ್ಞಾನಿ. ಆದರೂ ವಿನಯವಾರಿಧಿ, ಆ ಮಹಾಪುರುಷ ಕೊಟ್ಟುಹೋಗಿರುವ ಸಂದೇಶ ನಮಗಿಂದು ದಾರಿದೀಪಗಳೆಂದರು.

ಸಮಾಜದ ಎಲ್ಲ ವರ್ಗಗಳ ಜನರನ್ನೂ ಸಮಭಾವದಿಂದ ಕಂಡು, ಗೌರವಿಸಿ, ಸ್ಥಾನಮಾನ ನೀಡಿ ಕೈಹಿಡಿದು ನಡೆಸಿದ ಪರಿವರ್ತನಕಾರ ಬಸವಣ್ಣ. ತುಳಿತಕ್ಕೆ ತುತ್ತಾದವರ ನೆತ್ತಿಯಮೇಲೆ ಹೊತ್ತು ಕುಣಿದಾಡಿದ ಮಹೋನ್ನತ ಮೂರ್ತಿ. 'ಅಪ್ಪನು ಮಾದಾರ ಚೆನ್ನಯ್ಯ.' ಎನ್ನುವಷ್ಟು ದೊಡ್ಡ ಹೃದಯ ಆತನದು. ಅವರು ರಚಿಸಿದ ಸಮಾಜ ಸರ್ವಾಂಗ ಸುಂದರ, ಕ್ರಿಯಾಶೀಲ, ಸೇವಾ ಜೀವನಕ್ಕೆ ನಿಷ್ಠವಾದ ಸಮಾಜ ಎಂಬ ಮಾತುಗಳನ್ನಾಡಿದರು ಶ್ರೀ ಎಸ್. ಎಂ ಭಾಸ್ಕರಾಚಾರ್‌ರವರು.

"ಮಂಗಳ ಮಹೋತ್ಸವದ ಆಚರಣೆ, ಸಮಾರಂಭ ವ್ಯವಸ್ಥಿತವಾಗಿದೆ. ರಾಷ್ಟ್ರ ಇಂದು "ನೈತಿಕ ದಿವಾಳಿ"ಯನ್ನನುಭವಿಸುತ್ತಿದೆ ಭ್ರಷ್ಟಾಚಾರ ಹೆಚ್ಚಿದೆ, ಗೂಂಡಾಗಿರಿ ನಗ್ನ ತಾಂಡವ ನಡೆಸಿದೆ. ಬಡತನ ಎದ್ದು ಕಾಣುತ್ತಿದೆ, ಸ್ವಾತಂತ್ರ್ಯದ ಫಲ ದಕ್ಕಲಿಲ್ಲ, ಆಸೆ ಅರಳಲಿಲ್ಲ, ಆ ಕಾರಣದಿಂದ ಜಯಂತಿಯ ಆಚರಣೆ ಇಂದು ಅಗತ್ಯವಾಗಿದೆ ಬಸವ ಜಯಂತಿ ಕೊಂಬುಕಹಳೆಗಳ, ವಾದ್ಯಮೇಳಗಳ, ಸಭೆ ಸಮಾರಂಭಗಳ ವ್ಯಕ್ತಿ ಪ್ರತಿಷ್ಠೆಗಳ ಆಡಂಬರದ ಪ್ರದರ್ಶನಕ್ಕಾಗಿಯಲ್ಲ. ಆತ್ಮ ವಿಮರ್ಶೆಯ, ಸತ್ಸಂಕಲ್ಪದ, ಹೊಸ ಹಾದಿಯಲ್ಲಿ ಹೆಜ್ಜೆ ಹಾಕುವುದಕ್ಕಾಗಿ ರಾಷ್ಟ್ರ ನಿರ್ಮಾಣದಲ್ಲಿ ಪಾಲ್ಗೊಳ್ಳುವುದಕ್ಕಾಗಿ, ಇದು ಮತೀಯವಾಗಬಾರದು, ಧಾರ್ಮಿಕವಾಗಬೇಕು. ವಿಚಾರಪೂರ್ಣವಾಗಬೇಕು, ಧರ್ಮಜೀವನದ ಜೀವನಾಡಿ, ಚೈತನ್ಯಶಕ್ತಿ, ಅದ್ಭುತ

ಸೆಲೆ ಆದರ ಅರಿವನ್ನು ಇಂದಿನ ಯುವ ಜನಾಂಗಕ್ಕೆ ತಂದುಕೊಡಬೇಕು. ಶೋಷಣೆ ಹೇಳತೀರದಾಗಿದೆ. ನಾಯಕರುಗಳಲ್ಲಿ ಅದರ ವಿಶ್ವರೂಪ ದರ್ಶನವೇ ನಡೆದಿದೆ. ಅದಕ್ಕಾಗಿ ಬೇಕು ಈಗ ಶರಣ ಧರ್ಮದ ಪುನರುತ್ಥಾನ. ಇಂದಿನ ಸಮಸ್ಯೆಗಳ ಪರಿಹಾರ ಬಸವ ಮಾರ್ಗದಲ್ಲಿ ನಡೆದಾಗಲೇ ಸಾಧ್ಯ. ಭಗವಾನ್ ಬಸವಣ್ಣನವರು ಧರ್ಮವನ್ನು ರಾಜಕೀಯದಲ್ಲಿ ಬೆರಸಿದರು, ಬಂಗಾರಕ್ಕೆ ಪರಿಮಳದ ಕಂಪನ್ನು ಬೆರಸಿದರು. ಧರ್ಮರಾಹಿತ್ಯವಾದ ರಾಜಕೀಯ ಅರ್ಥಹೀನವೆಂಬುದನ್ನು ತೋರಿಸಿದರು. ವಿವಿಧ ಕುಲಧರ್ಮಗಳ ಅನುಭಾವದ ರಸಪಾಕವನ್ನು ಹದಗೊಳಿಸಿ ಸಮಾಜ ನಿರ್ಮಾಣ ಮಾಡಿದರು. ಅವರು ಕಟ್ಟಿದ ಸಮಾಜದಲ್ಲಿ ಎಲ್ಲರುಂಟು. ಸನ್ಯಾಸಿಗಳು, ಸಂಸಾರಿಗರು, ಸ್ತ್ರೀಯರು, ಪುರುಷರು, ಬಡವರು, ಬಲ್ಲಿದರು, ಕವಿಗಳು, ಕಲಾವಿದರು, ಶ್ರಮಜೀವಿಗಳು, ಬುದ್ಧಿಜೀವಿಗಳು ಎಲ್ಲರೂ ಇದ್ದಾರೆ ಅಲ್ಲಿ. ಆರ್ಥಿಕ ಸಮಾನತೆಯನ್ನು ತಂದುಕೊಟ್ಟ ದೂರದರ್ಶಿ, ಸಮರ್ಥ ಮುಂದಾಳು ಬಸವಣ್ಣನವರು. ಜೀವನ ಸೌಕರ್ಯಗಳ ಪರಿಪೂರ್ಣತೆಯನ್ನು ಪೂರೈಸಿಕೊಡುವಂಥ ವ್ಯವಸ್ಥೆ ಅವರದು. ಜಗತ್ತಿನ ಪ್ರತಿಯೊಂದು ಜೀವಿಗೂ ಭಗವಂತ ಶಕ್ತಿಕೊಟ್ಟಿದ್ದಾನೆ. ಅದರ ಸದ್ವಿನಿಯೋಗ

ವಾಗಬೇಕು, ಸದುಪಯೋಗವಾಗಬೇಕು. ಸನ್ಯಾಸಿಯಾದರೂ ಕಾಯಕದಿಂದಲೇ ಜೀವಿಸಬೇಕು. "ಶಿವಯೋಗಿಯ ಶರೀರ ವೃಥಾ ಸವೆಯಲಾಗದು" ಕಾರ್ಯ ಜೀವಿಗಳ ಇನ್ನೊಂದು ಲಕ್ಷಣ ಅಪರಿಗ್ರಹ ಮನೋಧರ್ಮ. ಸಂಗ್ರಹಗುಣ ಅವರಿಗೆ ಬಗ್ಗದ್ದು, ನಮ್ಮದು ಹಳ್ಳಿಗಳ ನಾಡು, ದೇಶದ ಉದ್ಧಾರ ಹಳ್ಳಿಗಳ ಉದ್ಧಾರದಲ್ಲಡಗಿದೆ. ಆದರಿಂದು ದೇಶ ವಿಲಕ್ಷಣವಾಗಿ ಬೆಳೆಯುತ್ತಿದೆ. ಕೋಟಿ ಕೋಟಿ ಹಣ ಖರ್ಚಾಗುತ್ತಿದೆ; ಬಡತನ ಬೆಳೆಯುತ್ತಿದೆ. ಜನಸಂಖ್ಯೆಯೊಂದೇ ದೇಶದ ಬಡತನಕ್ಕೆ ಕಾರಣವಲ್ಲ; ದುಡಿಮೆಯ ಅಭಾವ, ಸೋಗಿನ ಬದುಕಿನ ದುರಾಸೆಯೂ ಕಾರಣ. ಬಸವ ತತ್ವಗಳಿಂದ ಮಾರ್ಗದರ್ಶನ ಹೊಂದುವ ತೀವ್ರ ಪ್ರಯತ್ನ ಎಂದಿಗಿಂತ ಇಂದು ಹೆಚ್ಚು ಅಗತ್ಯವೆನಿಸಿದೆ ಪ್ರಪಂಚದ ಇತಿಹಾಸವನ್ನವಲೋಕಿಸಿದಾಗ ಹೆಣ್ಣನ್ನು ಶರಣರು ಕಂಡ, ಗೌರವಿಸಿದ ರೀತಿ ಆದರ್ಶನೀಯವಾಗಿದೆ. ಅವಳಿಗಾಗುತ್ತಿದ್ದ ಶೋಷಣೆಯನ್ನು ತಪ್ಪಿಸುವಲ್ಲಿ ಅವರು ಮಾಡಿದ ಸೇವೆ ಅವಿಸ್ಮರಣೀಯ ಅವಳ ಭಾಗಕ್ಕೆ ಹೊಸ ದೃಷ್ಟಿಕೊಟ್ಟರು ಬಸವಣ್ಣನವರಂಥ ವಿಚಾರಶೀಲ, ಧೈರ್ಯವಂತ, ವಿನಯಸಾಗರ ಬೇರೊಬ್ಬರಿಲ್ಲ ಎಂದು ಆಶೀರ್ವಚನ ಮಾಡಿದರು ಪರಮ ಪೂಜ್ಯ ಶ್ರೀ ಶ್ರೀಗಳವರು.

ರಾತ್ರಿ 'ಜಗಜ್ಯೋತಿ ಬಸವೇಶ್ವರ' ನಾಟಕ ನಡೆಯಿತು. ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ (150 ನೆಯ ಪ್ರಯೋಗ) ಸುಮಾರು ಇಪ್ಪತ್ತೈದು ಸಹಸ್ರ ಜನ ಪ್ರೇಕ್ಷಕ ಸಮೂಹವನ್ನು ಕಂಡ ಹರಿಕಾರನ ಹಳ್ಳಿಯವರು ಬೀಗಿಹೋದರು. "ತುರುವೇಕೆರೆಯಲ್ಲಿ ನಡೆದ ಸಿದ್ಧರಾಮ ಜಯಂತಿಯ ಸಭೆಗಿಂತ ಯಾವುದರಲ್ಲೂ ಕಡಿಮೆಯಿರಲಿಲ್ಲ" ಎಂದುಕೊಳ್ಳುತ್ತಿದ್ದರು. ನಾಟಕ ನೋಡಿದ ಹಿರಿಯರೊಬ್ಬರು. "ಕೊಂಡಿಮಂಚಣ್ಣ ಪೆದ್ದರಸರ ಜೋಡಿ ಹೇಳಿ ಮಾಡಿಸಿದಂಗವೆ" ಅಲ್ವಾ ಎಂದರೊಬ್ಬರು. "ನೀಲಾ-ಗಂಗಾ"ರು ಹಂಗೆ ಅಲ್ವಾ ಇನ್ನೊಬ್ಬರ ಅಂಬೋಣ, ಪೂಜ್ಯಪಾದರ ಕಾರು ಚಲಿಸಿತ್ತು. ●

# ಅಮೃತವಾಣಿ

ತಾಯಿಗೆ ತನ್ನ ಎಲ್ಲಾ ಮಕ್ಕಳಲ್ಲಿಯೂ ಸಮ ಪ್ರೀತಿಯೇ ಆದರೆ ಪ್ರತಿ ಮಗುವಿಗೂ ಅದಕ್ಕೆ ಒಗ್ಗುವ ಆಹಾರವನ್ನು ಮಾತ್ರ ಕೊಡುತ್ತಾಳೆ. ಅದೇ ರೀತಿ ಬೇರೆ ಬೇರೆ ಆಧ್ಯಾತ್ಮಿಕ ಮಟ್ಟದಲ್ಲಿರುವ ಭಿನ್ನ ಸಾಮರ್ಥ್ಯದವರಿಗಾಗಿ ಭಗವಂತನು ಬೇರೆ ಬೇರೆ ಉಪಾಸನಾ ವಿಧಾನಗಳನ್ನು ಕಲ್ಪಿಸಿ ಕೊಟ್ಟಿರುತ್ತಾನೆ.

ಇವೆಲ್ಲವೂ ನಾನೇ, "ಇವೆಲ್ಲವೂ ನೀನೇ" ಅಥವಾ "ನೀನು ಪ್ರಭು; ನಾನು ದಾಸ" ಎಂಬ ಮೂರು ಭಾವಗಳಲ್ಲಿ ಯಾವುದಾದರೊಂದರಲ್ಲಿ ನಿಷ್ಠೆ ಪಡೆದಾಗ ಮಾತ್ರ, ಮಾನವನಿಗೆ ದೈವ ಪ್ರಾಪ್ತಿಯು ಸಾಧ್ಯ.

—ಶ್ರೀ ರಾಮಕೃಷ್ಣ ಪರಮಹಂಸರು

---





## ಸಿದ್ಧಗಂಗಾ ಮಾಸಿಕ ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳ ಸಂಬಂಧಪಟ್ಟ ಮಾಹಿತಿ

### ಫಾರಂ ೪

೧. ಪ್ರಕಟಣೆಯ ಸ್ಥಳ : ಶ್ರೀ ಸಿದ್ಧಗಂಗಾ ಮಠ

೨. ಪ್ರಕಟವಾಗುವ ಅವಧಿ : ಮಾಸಿಕ

೩. ಮುದ್ರಣ ಭಾಷೆ : ಕನ್ನಡ

೪. ಮುದ್ರಕರ ಹೆಸರು : ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು
ರಾಷ್ಟ್ರೀಯತೆ : ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ (ಕರ್ನಾಟಕ)

೫. ಪ್ರಕಾಶಕರ ಹೆಸರು : ಹೆಚ್. ಬಿ. ಗಂಗಾಧರಯ್ಯ
ರಾಷ್ಟ್ರೀಯತೆ : ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ, (ಕರ್ನಾಟಕ)

೬. ಸಂಪಾದಕರ ಹೆಸರು : ಶ್ರೀ ಪಂ॥ ಚನ್ನಪ್ಪ ಎರೇಸೀಮೆ
ರಾಷ್ಟ್ರೀಯತೆ: ಭಾರತೀಯ
ವಿಳಾಸ : ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ, (ಕರ್ನಾಟಕ)

೭. ಪತ್ರಿಕೆಯ ಮಾಲೀಕರು : ಶ್ರೀ ಶಿವಕುಮಾರ ಮಹಾ ಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ, (ಕರ್ನಾಟಕ)

೮. ನೊಂದಣಿ ಸಂಖ್ಯೆ : ಕೆ. ಆರ್. ಎನ್. ಕ್ಯೂ. ೯.

ನಾನು ಹೆಚ್. ಬಿ. ಗಂಗಾಧರಯ್ಯ, ಮೇಲಿನ ಅಂಶಗಳೆಲ್ಲ ಸತ್ಯ ಎಂದು ನನ್ನ ಜ್ಞಾನ ಮತ್ತು ನಂಬಿಕೆಗಳಿಂದ ದೃಢಪಡಿಸುತ್ತೇನೆ.

೧ ಮಾರ್ಚಿ ೧೯೮೫ (ಸಹಿ) ಹೆಚ್. ಬಿ. ಗಂಗಾಧರಯ್ಯ
ಸಿದ್ಧಗಂಗಾ ಮಠ ಪ್ರಕಾಶಕರು.

# ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ.

ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು–೧

## ಠೇವಣಾತಿ ಯೋಜನೆಗಳು ಮತ್ತು ಬಡ್ಡಿ ದರಗಳು :

**ಉಳಿತಾಯ ಖಾತೆ :**

ಉಳಿತಾಯವೇ ಆಪದ್ಧನ

ಈ ಖಾತೆಯನ್ನು ರೂ. 5-00 ಗಳಿಂದ ಆರಂಭಿಸಬಹುದು. ನಿಮ್ಮ ಹೆಸರಿಗೆ ಬಂದ ಚೆಕ್ಕುಗಳನ್ನು ನಾವು ಪಡೆದು ವಸೂಲಿಗೆ ಕಳುಹಿಸಿಕೊಡುವೆವು. ನೀವು ಖಾತೆಯಲ್ಲಿಡುವ ಮೊಬಲಗಿಗೆ ಆ ತಿಂಗಳ ಕನಿಷ್ಠ ಶಿಲ್ಕಿನ ಮೇಲೆ ಬಡ್ಡಿಯನ್ನು ಕೊಡಲಾಗುವುದು. ಅವಶ್ಯಕತೆ ಬಂದಾಗ ಹಣವನ್ನು ಪಡೆಯಬಹುದು. ನಿಮ್ಮ ಖಾತೆಯಲ್ಲಿ ಕನಿಷ್ಠ ಶಿಲ್ಕು ರೂ. 100-00 ಇದ್ದರೆ ನಿಮಗೊಂದು ಚೆಕ್ ಪುಸ್ತಕ ಉಪಯೋಗಿಸಲು ಅವಕಾಶವಿದೆ.
ಶೇಕಡ 6 ರಂತೆ ಬಡ್ಡಿಯನ್ನು ನೀವಿಟ್ಟ ಕನಿಷ್ಠ ಶಿಲ್ಕು ತಿಂಗಳು ಮೊಬಲಗಿನ ಮೇಲೆ ಕೊಡುತ್ತೇವೆ.

**ಚಾಲ್ತಿ ಖಾತೆ :**

ಈ ಖಾತೆಯನ್ನು ರೂ. 100-00 ಗಳ ಮೇಲ್ಪಟ್ಟು ಆರಂಭಿಸಬಹುದು.
ಶೇಕಡ 3 ರಂತೆ ಬಡ್ಡಿಯನ್ನು ಕನಿಷ್ಠ ತಿಂಗಳ ಶಿಲ್ಕಿನ ಮೇಲೆ ಕೊಡಲಾಗುವುದು.

### ಮುದ್ದತಿ ಠೇವಣಾತಿಗಳು

ಠೇವಣಾತಿಗಳ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 15 ದಿವಸದಿಂದ | 45 ದಿವಸಗಳವರೆಗೆ | ಶೇ. | 4 |
| 46 ದಿವಸದಿಂದ | 90 ದಿವಸಗಳವರೆಗೆ | ಶೇ. | 5 |
| 91 ದಿವಸದಿಂದ | 6 ತಿಂಗಳ ಒಳಗೆ | ಶೇ. | 6 |
| 6 ತಿಂಗಳಿಂದ | 9 ತಿಂಗಳ ಒಳಗೆ | ಶೇ. | 7 |
| 9 ತಿಂಗಳಿಂದ | 1 ವರ್ಷದ ಒಳಗೆ | ಶೇ. | 8 |
| 1 ವರ್ಷದಿಂದ | 2 ವರ್ಷಗಳು | ಶೇ | 9 |
| 2 ವರ್ಷ ಮೇಲ್ಪಟ್ಟು | 3 ವರ್ಷಗಳ ಒಳಗೆ | ಶೇ. | 10 |
| 3 ವರ್ಷ ಮೇಲ್ಪಟ್ಟು | 5 ವರ್ಷಗಳ ಒಳಗೆ | ಶೇ. | 11 |
| 5 ವರ್ಷ ಮೇಲ್ಪಟ್ಟು | .... .... .... | ಶೇ. | 12 |

